149

" ಪ್ರೇಮವೇ ದೇವನು "

ಕರ್ನಾಟಕಕಾವ್ಯಲಕ್ಷಣದೀಕ್ಷಾಚಾರ್ಯ ಮಹಾಕವಿ

# ಹಂಪೆಯ ಹರಿಹರದೇವನ ರಗಳೆಗಳು

## ಭಾಗ ೧.

ಸಂಪಾದಕರು :

ಪ್ರೊ. ಬಸವರಾಜ ಚನ್ನವೀರಪ್ಪ ಜವಳಿ, ಎಂ ಎ.

ಸಾಹಿತ್ಯರತ್ನ ವೀರಭದ್ರಪ್ಪ ಮಹಾಲಿಂಗಪ್ಪ ಮಲ್ಲಾಬಾದಿ

ತರಳಬಾಳು ಹುಣ್ಣಿಮೆಯು ಸವಿನೆನಹಿನ

# ಗ್ರಂಥ ಪ್ರಕಟನೆ

— × —

ಚಿತ್ರದುರ್ಗ ಜಿಲ್ಲಾ ಸನ್ನುತ ತುಂಗಭದ್ರಾ ತೀರದಲ್ಲಿರುವ

## ಹರಿಹರ ಕ್ಷೇತ್ರದಲ್ಲಿ

ದಿನಾಂಕ. ೯-೨-೧೯೭೩ನೆಯ ಶುಕ್ರವಾರದಿಂದ ೧೭-೨-೧೯೭೩ನೆಯ

ಶನಿವಾರ ಈ ಒಂಭತ್ತು ದಿನಗಳು

ಜನತೆಯ ಕವಿ, ರಾಷ್ಟ್ರಕವಿ, ಮಹಾಕವೀಶ್ವರ

## ಹಂಪೆಯ ಹರಿಹರದೇವನ ಸ್ಮಾರಕ

## ಮಹಾ ಮಂಟಪದಲ್ಲಿ

ಚಿರಸ್ಮರಣೀಯವಾಗಿ ನೇರವೇರಿದ

ಶರಣತತ್ತ್ವ ಪ್ರಚಾರ ಸೀಮಾ ಸಮಾರಂಭವಾದ

ತರಳಬಾಳು ಹುಣ್ಣಿಮೆಯ

ಸವಿನೆನಹಿಗಾಗಿ

**ಹಂಪೆಯ ಹರಿಹರದೇವನ ಕೃತಿಗಳ**

ಮೊದಲನೆಯ ಭಾಗವಾದ

ಈ ಗ್ರಂಥವನ್ನು ಪ್ರಸಾರಮಾಡಲಾಗಿದೆ.

೧೩-೨-೧೯೭೩ — ಪ್ರಕಾಶಕ

ಪ್ರೇಮದ ಬಳ್ಳಿಯು ಬಳಗದ ಎಂಟನೆಯ ಪುಷ್ಪ

---

ಮ ಹಾ ಕ ವಿ

# ಹಂಪೆಯ ಹರಿಹರದೇವನ ರಗಳೆಗಳು

## ಭಾಗ ೧.


ಸಂಪಾದಕರು:

ಪ್ರೊ. ಬಿ. ಸಿ. ಜವಳಿ ಎಂ. ಎ.

ಸಾಹಿತ್ಯರತ್ನ ಮಲ್ಲಾಬಾದಿ ವೀರಭದ್ರಪ್ಪ






ಪ್ರಕಾಶಕರು:

ಪಂಪಾ ಸಾಹಿತ್ಯ ಪ್ರಕಟನಾಲಯ

ದಾವಣಗೆರೆ — ಧಾರವಾಡ

Hampeya Hariharadevan Ragallgalu
Vol No. I Edited by
Prof. B. C. Javali, M. A.
Lecturer in Kannada, Karnatak University, Dharwar-3

and

Shri. V. M. Mallabadi
*Published by :*
*Hariswar V. Mallabadi*
The Pampa Sahitya Parakatanalya, Dharwar-8



First Published : 11-10-1958
Second Published : 13-2-1973
Copies 1000
Ordenary Rs. 4-00 Calico Rs. 5-00

ಪ್ರ ಕಾ ಶ ಕ ರು :
ಹರೀಶ್ವರ ವೀರಭದ್ರಪ್ಪ ಮಲ್ಲಾಬಾದಿ
ಪಂಪಾ ಸಾಹಿತ್ಯ ಪ್ರಕಟನಾಲಯ ಧಾರವಾಡ — 8
ಮೊದಲನೆಯ ಮುದ್ರಣ ೧೧–೧೦–೫೮
ಎರಡನೆಯ ಮುದ್ರಣ ೧೩–೨–೭೩
೧೦೦೦ ಪ್ರತಿಗಳು
ಸುಂದರ ಪ್ರತಿ ೪—೦೦ ಕ್ಯಾಲಿಕೋ ಪ್ರತಿ ೫—೦೦

ಮು ದ್ರ ಕ ರು :
ಚಂದ್ರಶೇಖರ ತಡಕೋಡ
ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್, ಧಾರವಾಡ

## " ಮುಡುಪು "

ಇತಿಹಾಸ ಪ್ರಸಿದ್ಧ ಬಳ್ಳಾರಿ ಜಿಲ್ಲಾ ಕುರುಗೋಡು ಕ್ಷೇತ್ರದಲ್ಲಿರುವ

**ಶ್ರೀ ದೊಡ್ಡಬಸವೇಶ್ವರ ನೀಲಮ್ಮನವರ**

ಪರಮಭಕ್ತರೂ

ಜೋಳದರಾಶಿ ಗ್ರಾಮದಲ್ಲಿ ನಾಮಾಂಕಿತ ನೇಗಿಲು ಯೋಗಿಗಳೂ

ಗುರುಲಿಂಗಜಂಗಮ ಭಕ್ತಿಪಾರಾಯಣರೂ

ಉಜ್ವಲ ಆಂಧ್ರಕರ್ನಾಟಕ ನಾಟಕ ಸಾಹಿತ್ಯಕಲಾ ಪ್ರೇಮಿಗಳೂ

ಕೆಚ್ಚೆದೆಯ ಧರ್ಮಾಭಿಮಾನಿಗಳೂ

ಶ್ರೇಷ್ಠನಾಟಕಾಭಿನಯ ಕಳಾಪ್ರವೀಣ, ಉಭಯಕವಿತ್ವಸಮರ್ಥ, ನೂತನ ವಚನಕಾರ
ಶೂನ್ಯಸಂಪಾದನೆಯ ಐಕ್ಯೈಕ ಪ್ರವಚನ ಪಟು, ರಸರುಚಿಯರಾಗಿ
ಕನ್ನಡನಾಡಿಗೆ ಕೀರ್ತಿತಂದ ಗಮಕಕಳಾನಿಧಿ

**ಜೋಳದರಾಶಿ ಕೆಂಗಲ್ಲು ದೊಡ್ಡನಗೌಡರನ್ನು**

ಅವರ

ಏಕಮಾತ್ರ ಸಹೋದರಿ ನೀಲಮ್ಮನವರನ್ನು

ಮಕ್ಕಳಾಗಿ ಪಡೆದ

ಮಹಾಭಾಗ್ಯಶಾಲಿ ದಾಸೋಹಂಭಾವಿ

# ಶ್ರೀ. ಜೋಳದರಾಶಿ ಕೆಂಗಲ್ಲು ಪಂಪನಗೌಡರ

ಪುಣ್ಯ ಸ್ಮರಣೆಗಾಗಿ

ಈ ಗ್ರಂಥವನ್ನು ಮುಡುಪಾಗಿರಿಸಿದೆ.

ಧಾರವಾಡ

೧೩-೨-೧೯೭೩ — ಮಲ್ಲಭದ್ರ

# ಪ್ರಕಾಶಕರ ಅರಿಕೆ

## ( ಮೊದಲನೆಯ ಮುದ್ರಣ )

ಮಹಾಕವಿ ಹಂಪೆಯ ಹರಿಹರದೇವನ ಕೃತಿಗಳಲ್ಲಿ ಹದಿನಾಲ್ಕು ರಗಳೆಗಳನ್ನು ಆಯ್ದುಕೊಂಡು ೧೧. ೧೦. ೧೯೫೮ರಲ್ಲಿ ಈ ಗ್ರಂಥವನ್ನು ಪ್ರಕಟಿಸಲಾಯಿತು. ಕರ್ನಾಟಕದ ಸುಪ್ರಸಿದ್ಧ ವಿದ್ವಾಂಸರೂ, ಕರ್ಮಯೋಗಿಗಳೂ, ವಿದ್ಯಾಪ್ರಸಾರ ದೀಕ್ಷಾಬದ್ಧರೂ ಆಗಿದ್ದ ಪ್ರೊ. ಬಸವನಾಳು ಶಿವಲಿಂಗಪ್ಪನವರು, ಮಲುಹಣ ದೇವನ ರಗಳೆಗೆ ಮುನ್ನುಡಿಯನ್ನು ಬರೆಯುತ್ತಾ "ಹರಿಹರದೇವನ ರಗಳೆಗಳ ಮಹಾಸಾಗರದಲ್ಲಿದ್ದ ಇನ್ನುಳಿದ ರತ್ನಗಳನ್ನು ಒಂದೊಂದಾಗಿ ಆಯ್ದು ಈ ಪ್ರೇಮದಬಳ್ಳಿಯ ಬಳಗದವರು ಒಳ್ಳೆಯ ಅಚ್ಚು ಮೆಚ್ಚಾಗಿ ಮುದ್ರಿಸುವರು ಎಂದು ಹಾರೈಸುತ್ತೇನೆ" ಎಂದು ಆಶೀರ್ವದಿಸಿದ್ದಾರೆ. ಅದರಂತೆ ಸಂಪಾದಕರು ಶ್ರದ್ಧೆ ಭಕ್ತಿ ಉತ್ಸಾಹದಿಂದಲೂ ವಿಶೇಷ ಪರಿಶ್ರಮದಿಂದಲೂ ಈ ಕಾರ್ಯ-ನಿರ್ವಹಿಸಿಕೊಟ್ಟಿದ್ದಾರೆ. ಈ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ನೆರವಾದವರಿಗೆಲ್ಲಾ ಶ್ರೀ ಪಂಪಾಪತಿ ವಿರೂಪಾಕ್ಷನು ಸನ್ಮಂಗಳವನ್ನೀಯಲಿ.

ದಾವಣಗೆರೆ
೧೧-೧೦-೧೯೫೮

ಮಲ್ಲಾಬಾದಿ ಮಹಾಂತಪ್ಪ ಸಹೋದರರು
ಪ್ರಕಾಶಕರು

## ( ಎರಡನೆಯ ಮುದ್ರಣಕ್ಕೆ )

ಮೊದಲನೆಯ ಮುದ್ರಣದಲ್ಲಿ ಪ್ರಕಟವಾಗಿದ್ದ ನಮಃಶಿವಾಯ ರಗಳೆಯೊಂದನ್ನು ಅರುವತ್ತು ಮೂವರು ಪುರಾತನರ ಗದ್ಯವನ್ನು ಬಿಟ್ಟು ಉಳಿದ ಹದಿಮೂರು ರಗಳೆಗಳನ್ನು ಈ ಗ್ರಂಥದಲ್ಲಿ ಪ್ರಕಟಿಸಲಾಗಿದೆ.

ಮೊದಲನೆಯ ಮುದ್ರಣದಲ್ಲಿ ಕಂಡುಬಂದ ಕೆಲವು ಮುದ್ರಣ ದೋಷಗಳನ್ನು ತಿದ್ದಿ ಪರಿಷ್ಕರಿಸಲಾಗಿದೆ. ಹರಿಹರದಲ್ಲಿ ನೆರವೇರಿದ ತರಳಬಾಳು ಹುಣ್ಣಿಮೆ ಸಮಾರಂಭಕ್ಕಾಗಿ ಬಹು ಅವಸರದಲ್ಲಿ ಮುದ್ರಣಕಾರ್ಯ ನೆರವೇರಿಸಿ ಕೊಟ್ಟ ಮುದ್ರಣಾಲಯದವರಿಗೆ ಅಭಿನಂದನೆಗಳು. ಎಂದಿನಂತೆ ಸಹೃದಯರಾದ ವಾಚಕರಿಗೆ ನಿರಂತರ ಕೃತಜ್ಞತೆಗಳನ್ನು ಸಲ್ಲಿಸದೇ ಇರಲಾರೆನು.

ಧಾರವಾಡ
೧೩-೨-೧೯೭೩

ಹರೀಶ್ವರ ಮಲ್ಲಾಬಾದಿ
ಪ್ರಕಾಶಕರು

# ಪರಿವಿಡಿ

ಶ್ರೀ

ಪಂಪಾ ವಿರೂಪಾಕ್ಷಲಿಂಗಾಯ ನಮಃ

" ಕರ್ನಾಟಕ ಕಾವ್ಯಲಕ್ಷಣದೀಕ್ಷಾಚಾರ್ಯ "

# ಮಹಾಕವಿ ಹಂಪೆಯ ಹರಿಹರದೇವ

ವಿರಚಿತ

# ೧. ಪ್ರಾರ್ಥನೆಯ ರಗಳೆ

( ಗುಣಸ್ತೋತ್ರದ ರಗಳೆ )

## [ ೧ನೆಯ ಭಾಗ ]

ಕಂದ ॥ ದೇವ ಹರದೇವ ಪುರಹರ
ದೇವ ಸದಾವರದದೇವ ಚಂದ್ರಾಭರಣಾ ॥
ದೇವಪತಿಯೆನಗೆ ಕರುಣಿಸು
ದೇವ ಕೃಪಾವಾರ್ಧಿ ಹಂಪೆಯ ವಿರೂಪಾಕ್ಷಾ ॥

### ಮಂದಾನಿಲ ರಗಳೆ

ದೇವ ಶ್ರೀ ಪಂಪಾಪುರದಧಿಪತಿ
ದೇವ ಸದಾನತ ಸಂಕುಳ ಸದ್ಗತಿ
ದೇವ ಭಾಸುರ ಪಿಂಗಳ ಜಟಾಧರ
ದೇವ ತರಂಗ ಲಸದ್ಗಂಗಾಧರ
ದೇವ ಮಹೇಶ ಸುಧಾಕರಶೇಖರ
ದೇವ ಕಿರೀಟಾಲಂಕೃತ ಶುಭಕರ
ದೇವ ಮಧುವ್ರಜ ಸಮನೀಳಾಳಕ
ದೇವ ಭವಾನೀಸಮುಸುಖಪಾಳಕ

ದೇವ ದಿವಾಕರಶಶಿಶಿಖಿಲೋಚನ
ದೇವ ನತವ್ರಜಮಾಯಾಮೋಚನ
ದೇವ ಭುಜಂಗಾರಾಜಿತ ಕುಂಡಲ
ದೇವ ಸಮುನ್ನತ ಘನಭುಜ ಮಂಡಲ
ದೇವ ಜಗತ್ಪಾವನ ಪಂಚಾನನ
ದೇವ ಹರಿಸ್ತುತ ನತಚತುರಾನನ
ದೇವಾ ನತಜನ ನಿರ್ಮಳಪದತಳ
ದೇವ ವಿಶುದ್ಧ ವಿಶಾಲೋರಸ್ಥಳ
ದೇವ ಗಜಾಜಿನಮಂಡಿತ ವಿಗ್ರಹ
ದೇವ ಪ್ರಮಥ ನಿಕಾಯಾನುಗ್ರಹ
ದೇವಾ ನಿಶಿತಾಯುಧಸಂಚಯಧರ
ದೇವಾ ಸರಸಿಜಭವ ಶಿರಧರಕರ

ದೇವ ಸುರವ್ರಜಮಸ್ತಕ ಭೂಷಣ
ದೇವ ಶರಣಸಂಕುಳದಘಶೋಷಣ
ದೇವ ಫಣಾಧರವಳಯ ವಿಮಂಡಿತ
ದೇವಾ ನತಜನಸದ್ಗತಿಸಂತತ
ದೇವಾ ಹರಿಬ್ರಹ್ಮಾರ್ಚಿತಪದತಳ
ದೇವ ಯಶೋಧವಳಿತ ದಿಕ್ ಸಂಕುಳ
ದೇವ ಪರಿವೃತ ಸರುಭೂರುಹ ಜಯ
ದೇವ ಅಪಾಯರಹಿತ ಜ್ಯೋತಿರ್ಮಯ
ದೇವಾ ಸಜ್ಜನಭವಭಯಭಂಜನ
ದೇವ ನಿರಂತರ ನಿತ್ಯನಿರಂಜನ

ದೇವ ಪುರತ್ರಯವನದಾವಾನಲ
ದೇವ ಜಲಂಧರಮೋಘಮಹಾಬಲ
ದೇವ ರತೀಶಮದಾಂಧದಿವಾಕರ
ದೇವ ಕೃತಾಂತ ಕಳೇವರ ಸಂಹರ

ದೇವ ಮೃಡಾಣೀದೇಹಾರ್ಧಪ್ರದ
ದೇವ ಸುವರ್ಣದ್ಯುತಿಚಕ್ರಪ್ರದ
ದೇವ ವಿಶಾಲ ವೃಷೇಂದ್ರಸುಖಾಸನ
ದೇವಾ ದಕ್ಷವಿಯಾಗ ವಿನಾಶನ
ದೇವಾ ನೇಕಶ್ರುತಿತತಿದುರ್ಲಭ
ದೇವ ಪುರಂಧರ ಸಂಕುಳವಲ್ಲಭ

ದೇವ ಮಹಾಸಂಪತ್ ಪರಿಶೋಭಿತ
ದೇವ ವಿಶೇಷಜ್ಞಾನ ವಿಭೂಷಿತ
ದೇವಾ ಮುಕ್ತಿನಿಕಾಯ ವಿರಾಜಿತ
ದೇವಾ ಶಕ್ತಿತ್ರಯ ಸಂಸೇವಿತ
ದೇವ ವಿಶುದ್ಧ ಷಡಧ್ವನಿಕೇತನ
ದೇವ ಸದಾ ಶರ್ವಾಣೀಚೇತನ
ದೇವ ಸಮುಜ್ವಲಸಾಮರ್ಥ್ಯವ್ರಜ
ದೇವ ನಗರ್ವಿತತದ್ವೃಷಭಧ್ವಜ
ದೇವಾ ನಿರುಪಮ ನಿರ್ಮಳ ನಿಷ್ಕಳ
ದೇವ ಸದಾವರಣಪ್ರಭುನಿಶ್ಚಳ

ದೇವಾ ತುಂಬುರವರನಾದಪ್ರಿಯ
ದೇವಾ ನಾರದವರವೀಣೋದಯ
ದೇವಾ ನಾದಪ್ರಿಯಸಂಭಾವನ
ದೇವಾ ಭಕ್ತಪ್ರಕರಮಹಾಘನ
ದೇವ ವಿಕರ್ತನಕೋಟಿ ಸಮಪ್ರಭ
ದೇವಾ ಕೋಟ್ಯಾನಲ ತೇಜಪ್ರಭ
ದೇವ ಜರಾಮಯ ಪಾಶವಿವರ್ಜಿತ
ದೇವ ಪ್ರಳಯಘನಗರ್ಜಿತ ಮಾರುತ
ದೇವ ಸುಹೃಜ್ಜನಹೃದಯಸದಾಗತ
ದೇವ ಧರಿತ್ರೀಧರ ಧನ್ವಂತರ

ದೇವ ನಿರಂತರ ದೇವನಿಗಾತನ
ದೇವ ಮಹೇಶ್ವರ ದೇವ ಮದೀಶ್ವರ
ದೇವ ಮಹಾಚಲ ದೇವ ಮಹಾಬಲ
ದೇವ ಮಹಾನಭ ದೇವಮಹಾಪ್ರಭ
ದೇವ ಮಹಾಶಶಿ ದೇವಮಹಾವಶಿ
ದೇವ ಮಹಾಭವ ದೇವ ಮಹಾಶಿವ
ದೇವ ಮಹಾಗುಣಿ ದೇವ ಮಹಾಮಣಿ
ದೇವ ಮಹಾಜಪ ದೇವಮಹಾತಪ

ಕಂದ ॥ ಶರಣು ಸುರತರುವೆ ಶರಣಾಂ
ಬುರುಹ ದಿವಾಕರನೆ ಶರಣು ಕರುಣಾಕರನೇ
ಶರಣು ಶರಣೆನುತಲಿರ್ದ್ದನು
ಕರುಣಿಸು ಸದ್ಭಕ್ತಿಯನಗೆ ಶ್ರೀ ವಿರೂಪಾಕ್ಷಾ ॥

ಪ್ರಾರ್ಥನೆಯ ರಗಳೆ ಸಮಾಪ್ತಂ

ಮಂಗಳ ಮಹಾ ಶ್ರೀ ಶ್ರೀ ಶ್ರೀ

# ಪಂಪಾಕ್ಷೇತ್ರದ ಮಹಿಮೆ

## ೨

ಕಂದ॥ ನೇತ್ರತ್ರಯ ನತ್ಯನುಪಮ
ಗಾತ್ರಂ ಬಿಡದೆಮಗೆ ಕುಡುಗೆ ಪಂಪಾನಾಥಂ।
ಧಾತ್ರೀತಳದೊಳ್ ಪಂಪಾಕ್ಷೇತ್ರ
ಸ್ತೋತ್ರವನೆ ಮಾಳ್ಪೆನ್ನಯ ಮತಿಗುನ್ನತಿಯಂ॥

ಲಲಿತ ರಗಳೆ

ಎಂತೆನೆ ಸಮುದ್ರಮುದ್ರಿತ ಧರಾ ಮಧ್ಯದೊಳ್
ಸಂತತಂ ಮೇರುವಿನ ದಕ್ಷಿಣ ವಿಭಾಗದೊಳ್
ಮೆಱೆವುದದು ಹೇಮಕೂಟಪ್ರಾಂತ ಶಿವಪುರಂ
ಹೆಱೆ ಸೂಡಿದಂ ನೆಲೆಸಿನಿಂದ ಪಂಪಾಪುರಂ
ಹರಿಯಜರು ಸೊಗಸಿನಿಂ ಪೊಗಳ್ದ ಪಂಪಾಪುರಂ
ಶರಣರೊಲವಿಂದೆ ನಲಿದಿರ್ಪ್ಪ ಪಂಪಾಪುರಂ
ಆ ಪುರದೊಳುಂ ನಾಲ್ಕು ಬಾಗಿಲುಗಳುಂ ನೋಡೆ
ಪಾಪಹರ ಸುತ್ತ ಯೋಜನ ಪ್ರಮಾಣಂ ಕೂಡೆ
ಅಲ್ಲಿ ಮೂಡಣ ಬಾಗಿಲೊಳಗಿರ್ಪನುನ್ನತಂ
ಸಲ್ಲಲಿತಗುಣ ಕಿನ್ನರೇಶ್ವರಂ ಶಾಶ್ವತಂ
ಅಲ್ಲಿ ತೆಂಕಣ ಬಾಗಿಲೊಳಗಿರ್ಪನಚಳಿತಂ
ಬಲ್ಲ ಶರಣರ ಜಂಬುಕೇಶ್ವರಂ ಶಾಶ್ವತಂ
ಪಶ್ಚಿಮದ್ವಾರದೊಳ್ ನೆಲಸಿರ್ಪನೊಪ್ಪದಿಂ
ನಿಶ್ಚಯ ದಿಟಂ ಸೋಮನಾಥನತಿ ಪ್ರೇಮದಿಂ
ಉತ್ತರ ದ್ವಾರದೊಳ್ ನೆಲೆಸಿರ್ಪ್ಪನೊಪ್ಪದಿಂ
ಉತ್ತಮ ಗುಣಸ್ಥಾಣು ವಾಣಿಭದ್ರೇಶ್ವರಂ

ಇಂತೆನಿಸಿ ಮೆರೆವ ನಾಲ್ಕು ಬಾಗಿಲುಗಳೊಳಗೆ
ತಿಂಥಿಣಿಪ ಶಿವಲಿಂಗವಿಪ್ಪುದಾ ಪುರದೊಳಗೆ
ಪಂಪಾ ವಿರೂಪಾಕ್ಷನಲ್ಲಿಂದನಂತರಂ
ಹೆಂಪಿಂದ ಹನುಮತೀಶ್ವರನಿಪ್ಪನುರುತರಂ

ರಂಭೇಶ್ವರಂ ಸಳೇಶ್ವರರಿಪ್ಪರಂತಲ್ಲಿ
ಶಂಭು ಮುಕ್ತೇಶ್ವರಂ ಮಲ್ಲಿಕಾರ್ಜುನರಲ್ಲಿ
ಮಂಗಳಾಸ್ಪದ ರಾಮಲಕ್ಷ್ಮಣೇಶ್ವರರಲ್ಲಿ
ಹಿಂಗದೆ ಮಹಾಂಕಾಳದೇವರೊಪ್ಪುವರಲ್ಲಿ
ವರದ ಮಾರ್ಕಾಂಡೇಶ್ವರಂ ನಿಂದನೊಲವಿಂದೆ
ಸುರರಾಜ ರಾಜನಪ್ಪಿಂದ್ರೇಶ್ವರಂ ಮುಂದೆ

ಗುರು ಸೋಮನಾಥನಿಪ್ಪಂ ಪುರದೊಳೊಲವಿಂದೆ
ಹಿರಿಯ ಹಂಪಾದೇವಿ ಚಿಕ್ಕ ಹಂಪಾದೇವಿ
ನಲವಿಂದೆಯೊಪ್ಪುತಿರೆ ನಿಂದನಜ್ಞೇಶ್ವರಂ
ನೆಲೆಸಿಹಂ ಮುಂದೆ ಪರಮಜ್ಞಾನಿ ಶಂಕರಂ

ತಾನಘೋರೇಶ್ವರಂ ದಾನಿ ನಾಗೇಶ್ವರಂ
ಶ್ರೀನಿಧಿಯುದಾರ ಕೇದಾರದೇವೇಶ್ವರಂ
ಕರಮೆಸೆವ ಲಿಂಗಛಾಯಾ ಮಲ್ಲಿಕಾರ್ಜುನಂ
ವರುಣೇಶ್ವರಂ ವಾಯುವೇಶ್ವರಂ ಪಾವನಂ
ತರದಿಂ ಕುಬೇರೇಶ್ವರಂ ರಂಜಿಸುವರಲ್ಲಿ
ಕರುಣಾದ್ರಿ ಈಶಾನ್ಯದೇವರೊಪ್ಪುವರಲ್ಲಿ
ಬ್ರಹ್ಮೇಶ್ವರಂ ದಯಾಪರನಗಸ್ತ್ಯೇಶ್ವರಂ
ಕ್ರಮದಿಂದೆ ಜಡೆಯ ಶಂಕರದೇವನೊಪ್ಪಿರಲು
ವಿಮಳ ಪಾತಾಳಗಂಗೆಯ ಸೋಮನೊಪ್ಪಿರಲು

ಲೋಕಪಾವನದೇವರುಂ ಕೋಟಿ ಶಂಕರಂ
ಲೋಕಕ್ಕೆ ರಂಜಿಪೇಕಾಂತ ರಾಮೇಶ್ವರಂ

ಇನ್ನು ನಾನರಿಯದವನೇಕಲಿಂಗಂ ಕೂಡೆ
ಸನ್ನಿಹಿತವಿಪ್ಪವಾಪುರದ ಸುತ್ತಲು ನೋಡೆ
ಎಣಿಸಲೆನ್ನಳವೆ ಪಂಪಾಪುರದ ಮಹಿಮೆಯುಂ
ತ್ರಿಣಯನುಂ ಲಿಂಗಮಯನಾದ ನಿಸ್ಸೀಮೆಯುಂ
ಇನ್ನುಳ್ಳ ತೀರ್ಥ ಸಂತಾನಮಂ ಪೊಗಳ್ದ ಪೆಂ
ಸನ್ನುತದಿ ಶಿವನ ಕಾರುಣ್ಯದಿಂ ಪೊಗಳ್ದಪೆಂ
ಅರರೆ ! ಮನ್ಮಥತೀರ್ಥವಿಪ್ಪುದನುರಾಗದಿಂ
ವರಸೋಮತೀರ್ಥದಿಂ ಮಹಾಂಕಾಳ ತೀರ್ಥದಿಂ
ಎಸೆವ ತಾರಾತೀರ್ಥದಿಂ ಸೂರ್ಯತೀರ್ಥದಿಂ
ಪಸರಿಸುವ ವತ್ಸತೀರ್ಥಂ ರೈಭ್ಯತೀರ್ಥದಿಂ
ನಾಗಮಾರ್ಕಾಂಡೇಯ ಗಜಾಶ್ವತೀರ್ಥಗಳಿಂ
ಮೇಗೆ ಕಾದಂಬರೀ ಬ್ರಹ್ಮ ತೀರ್ಥಂಗಳಿಂ
ಇಂತೆನಿಸಿ ಮೆರೆವ ಹೆನ್ನೊಂದು ತೀರ್ಥಂಗಳವು
ಕಂತುಮದಹರನ ಸದನಗಳೆನಿಪ ತೀರ್ಥವವು

ಮತ್ತಂ ಮಹಾನದೀಶ್ವರೀ ತುಂಗಭದ್ರೆಯೊಳು
ಉತ್ತಮ ವಶಿಷ್ಠನಾಶ್ರಮವಿಪ್ಪುದೊಲುಮೆಯೊಳು
ಅಲ್ಲಿ ಪಾಪವಿನಾಶಿ ಎಂಬ ನಾಮದ ತೀರ್ಥ
ಅಲ್ಲಿ ದಶಾಶ್ವಮೇಧಾ ವಿಧಾನದ ತೀರ್ಥ
ಅದರೊಳಗೆ ಬದರಿಕಾಶ್ರಮವುಂ ಕೋಟಿ ತೀರ್ಥ
ವದರೊಳಗೆ ಶಬರಿಕಾಶ್ರಮವುಂ ಕೋಟಿ ತೀರ್ಥ
ಮಿಗೆ ದೇವಪೂತ ಪಂಪಾ ಸರೋವರ ಮುಂದೆ
ಸೊಗಯಿಸುವ ಕಾಮದಹನದ ಭಸಿತವದು ಮುಂದೆ
ಅಲ್ಲಿಂದ ಮಾಲ್ಯವಂತಾಚಳಮದೊಪ್ಪುವುದು
ಸಲ್ಲಲಿತ ಋಣವಿಮೋಚನ ತೀರ್ಥವೊಪ್ಪುವುದು
ಉರಿಯಕ್ಷತೀರ್ಥಂ ಗಧಾತೀರ್ಥ ಧನುತೀರ್ಥ
ವರಶಂಖ ಚಕ್ರತೀರ್ಥಂ ಪದ್ಮದಳ ತೀರ್ಥ

ಹೇಮಕೂಟದ ಮೇಲೆ ವತ್ಸನಾಭಿಯ ತೀರ್ಥ
ಆ ಮಹಾಕ್ಷೇತ್ರದೊಳಗಗ್ನಿ ತೀರ್ಥಂ ಸ್ವಾರ್ಥ
ರಾಮತೀರ್ಥಂ ಸಂದ ಪಿತೃತೀರ್ಥವಂತಲ್ಲಿ
ಏಮಾತು ಮಾಂಗಲ್ಯತೀರ್ಥ ವೊಪ್ಪುವುದಲ್ಲಿ

ಶ್ರೀರುದ್ರಪಾದವಿಪ್ಪುದು ಧರಾರಾಜನದು
ನಾರಾಯಣಾದಿ ದೇವರ್ಕಳಿಗಭೇದ್ಯವದು
ಇನ್ನುಳ್ಳ ತೀರ್ಥಮಂ ಪೆರ್ಸಗೊಳ್ಳಲೆನ್ನಳವೆ
ಪನ್ನಗರ್ ಗರುಡ ಗಂಧರ್ವ ಸಂಕುಳರೆಳವೆ
ಹರಿಯಲ್ಲಿ ಯವಗಾಹವಿರ್ದು ಹರಿಪದವಿಯಂ
ಸರಸಿಜಭವಂ ಹರುಷದಿಂದಲಜಪದವಿಯಂ
ಸುರರಾಜನನುರಾಗದಿಂದಿಂದ್ರಪದವಿಯಂ
ಪರಮ ಕಾರಣಿಕರೆಲ್ಲರು ಪರಮಪದವಿಯಂ
ಪಡೆದರೆನೆ ತೀರ್ಥ ಮಹಿಮೆಯನೇನನೆಂದಪೆಂ
ಮೃಡನ ಘನತರ ಸಕಳಸಾಮರ್ಥ್ಯವೆಂದಪೆಂ
ಇತಪ್ಪ ಲಿಂಗತೀರ್ಥಂಗಳಿಂದಂ ತೀವಿ
ಸಂತತಂ ಶಿವಭಕ್ತಕುಲವನೊಲವಿಂದೋವಿ

ಇಪ್ಪರ್ದೀ ಧರೆಗೆ ತೊಡವೆನಿಸಿ ಪಂಪಾಪುರಂ
ಸರ್ಪಭೂಷಣ ಭಾವಭರಿತ ಪಂಪಾಪುರಂ
ಪೆಸರ್ಗೊಂಡರಘವ ನೊಣಗಿಸುವ ಪಂಪಾಪುರಂ
ಅಸಮಾಕ್ಷನಲ್ಲಿ ಕೂಡಿಸುವ ಪಂಪಾಪುರಂ
ಬಂದು ಮರೆಹೊಕ್ಕರಂ ಕಾವ ಪಂಪಾಪುರಂ
ಸಂದಣಿಸಿ ಬೇಡಿದುದನೀವ ಪಂಪಾಪುರಂ
ವಾರಣಾಸಿಗೆಯುಂ ಮಿಗಿಲಾದ ಪಂಪಾಪುರಂ
ಮಾರಾರಿಗಿಂದು ಪುಗಿಲಾದ ಪಂಪಾಪುರಂ
ಭವದ ಭಯಮಂ ನಿವಾರಿಸುವ ಪಂಪಾಪುರಂ
ತವೆ ದುರಿತವಂ ನಿವಾರಿಸುವ ಪಂಪಾಪುರಂ

ಶಿವಪುರ ಗಳೊಳಗೆ ಮಿಗಿಲಾದ ಪಂಪಾಪುರಂ
ಶಿವನ ಮನದೊಳಗೆ ಸಲೆ ನಲಿವ ಪಂಪಾಪುರಂ
ಸಕಳ ಪುಣ್ಯಂಗಳೋಲಗಿಪ ಪಂಪಾಪುರಂ
ಸಕಳ ಮುಕ್ತಿಗಳಲಂಕರಿಪ ಪಂಪಾಪುರಂ
ಅಣಿಮಾದಿಗುಣವಗಲದಿರ್ಪ ಪಂಪಾಪುರಂ
ತ್ರಿಣಯನಂಗ ( xxxx ) ತರ್ಪ ಪಂಪಾಪುರಂ ೧೦೦
ಪುರಹರಂ ಕಾಮನಂ ಸುಟ್ಟ ಪಂಪಾಪುರಂ
ಗಿರಿಜೆ ರತಿಗಭಯಮಂ ಕೊಟ್ಟ ಪಂಪಾಪುರಂ

ಆ ಪುರದೊಳೊಪ್ಪುವಂ ಶಶಿಧರಂ ವಿಷಧರಂ
ಕಾಪಾಲಿ ದಕ್ಷಾಧ್ವರಹರಂ ಪುರಹರಂ
ದುರಿತತಿಮಿರವ್ರಜ ದಿವಾಕರಂ ಭೀಕರಂ
ವರವೀವಮಿತ ಕರುಣಾಕರಂ ಶಂಕರಂ
ಸಕಳ ಚೈತನ್ಯ ವಿಸ್ತಾರಕಂ ಪ್ರೇರಕಂ
ಸುಕರ ಸುಕೃತೈಕ ನಿಸ್ತಾರಕಂ ಸಾರಕಂ
ಕಾಲ ಮನ್ಮಥಗರ್ವಶೋಷಣಂ ಭೀಷಣಂ
ಬಾಲಚಂದ್ರಕಳಾ ಪೋಷಣಂ ಭೂಷಣಂ ೧೧೦
ಹರಿಸುರಪ ಕಮಳರಾಜಿತಂ ಭಾವಿತಂ
ಶರಣನಿಕರಸ್ತೋತ್ರ ಪೂಜಿತಂ ಯೋಜಿತಂ
ಅಖಿಳಲೋಕಾಗಮಂ ಖಂಡಿತಂ ಮಂಡಿತಂ
ನಿಖಿಳೈಕ ಶಾಶ್ವತ ಮಹೋನ್ನತಂ ಸನ್ನುತಂ
ನೆಲಸಿರ್ಪನಖಿಳಗುರು ಪಂಪಾವಿರೂಪಾಕ್ಷ
ಒಲವಿಂದ ಶಾಂತಗುರು ಪಂಪಾವಿರೂಪಾಕ್ಷ
ಅಸಮ ಗುರು ವಿಷಮ ಗುರು ಪಂಪಾವಿರೂಪಾಕ್ಷ
ಎಸೆವ ಗುರು ವಿಶ್ವಗುರು ಪಂಪಾವಿರೂಪಾಕ್ಷ
ಎನ್ನ ಗುರು ಚೆನ್ನಗುರು ಪಂಪಾವಿರೂಪಾಕ್ಷ
ಉನ್ನತ ಸದೈಕಗುರು ಪಂಪಾವಿರೂಪಾಕ್ಷ ೧೨೦

ಇಂತು ಪಂಪಾವಿರೂಪಾಕ್ಷನಂ ಕೆಳೆಗೊಂಡು
ಸಂತತಂ ಶಿವಭಕ್ತಿ ನವರಸದ ಸವಿಗೊಂಡು
ಉರುತರಾವಳಿಯೊಳೊಪ್ಪಿತ್ತು ಪಂಪಾಪುರಂ
ಪರಮೇಶ್ವರನ ಸೆಜ್ಜೆಯೆನಿಪ ಪಂಪಾಪುರಂ ೧೨೪

ಕಂದ || ಪಂಪಾಕ್ಷೇತ್ರದ ಮಹಿಮೆಯು-
ನಿಂಪಿಂನಿಂ ಪೇಳ್ವ ಕೇಳ್ವ ಭಕ್ತರ್ಗೆಲ್ಲಂ ||
ಸೊಂಪಿಂದ ಪರಮಸುಖಮನ-
ಲಂಪಿಂದಂ ಕುಡುಗೆ ಹಂಪೆಯ ವಿರೂಪಾಕ್ಷಂ ||

( ಪಂಪಾಕ್ಷೇತ್ರದ ಮಹಿಮೆ ಸಮಾಪ್ತಂ)

**ಮಂಗಳ ಮಹಾ ಶ್ರೀ ಶ್ರೀ ಶ್ರೀ**

# ಹಂಪೆಯರಸನ ರಗಳೆ

೧

**ಸ್ರಗ್ಧರಾವೃತ್ತ**

ನಿತ್ಯ ಶ್ರೀಕಂಠಕಂಠಾಭರಣ ಕಿರಣಸಂಘಾತ ಸಂಭೂತನೂತ್ನಾ
ದಿತ್ಯ ಪ್ರೋತ್ತುಂಗ ಗಂಗಾಧರ ಪುರಹರ ಭಾಳಾಕ್ಷ ಚಂಚದ್ಭವಾನೀ
ಪ್ರತ್ಯಕ್ಷಸ್ವಾಮಿ ಕಾಮಾಂತಕ ನಿಖಿಳ ಮಖಾಧಾರ ವಿಸ್ತಾರ ಭಕ್ತ
ಗರ್ತ್ಯಂತ ಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

**ಉತ್ಸಾಹ ರಗಳೆ**

ದೇವ ನದಿಯ ನವಿರದೊದವಿ ನಿಡಿಯ ಜಡೆಯಮುಡಿಯೊಳಿಟ್ಟು
ದೇವ ಚಂದ್ರಕಳೆಯ ನಿಳೆಯಕಲೆಯನಲ್ಲಿ ಸಂತವಿಟ್ಟು
ಸಕಲ ರತ್ನನಿಕರಖಚಿತ ಮುಕುಟಧರನೆ ಹಂಪೆಯರಸ
ಪ್ರಕಟ ಮಕುಟ ಜಟಾಜೂಟವಿಹಿತ ಮಹಿಮ ಹಂಪೆಯರಸ
ಸುಕರವೆನಿಪನರ್ತಿಪಳಕ ಪಟಲ ನಿಟಿಲ ಹಂಪೆಯರಸ
ಸಕಲಲೋಕ ಭರಿತ ನಿರುತ ಸರ್ವಜೀವ ಹಂಪೆಯರಸ
ಮಂಡಿತ ಪ್ರಚಂಡ ಕಿರಣಗಂಡಯುಗಳ ಹಂಪೆಯರಸ
ತಂಡದಿಂದ ದೆಸೆಗೆ ಮಿಸುಪ ಸುಖದ ಮುಖವೆ ಹಂಪೆಯರಸ
ಪುರವನುರಿಪಿ ಧರೆಗೆ ಪರಮ ಹರುಷವಿತ್ತೆ ಹಂಪೆಯರಸ
ಶರಣಜನಕೆ ಹರಣವಾಗಿ ಕರುಣಿಸಿರ್ಪೆ ಹಂಪೆಯರಸ

ಕೇಳ್ವುದೆನ್ನ ಬಿನ್ನಪವನುಮಾಧಿನಾಥ ಹಂಪೆಯರಸ
ತಾಳ್ವುದಿದನು ಮುದ್ದುಮಾಡಿ ಭಾವಭರಿತ ಭಕ್ತಿಯೂಥ
ಸಕಲ ಕಾಮ ನಿಕರದಿಂದ ವಿಕಳನಾಗುತಿರ್ದೆನಯ್ಯ
ಸುಕರವೆನಿಪ ಬಕುತಿಯರಿಯದಖಿಳ ವಿಷಯಿಯಾದೆನಯ್ಯ

ಕೋಪ ತಾಪ ಲೇಪದಿಂದೆ ತಾಪಿಸುತ್ತಮಿರ್ದ್ದೆನಯ್ಯ
ಪಾಪ ಲಾಭ ಲೋಭದಿಂದೆ ಕೋಪಿಸುತ್ತಮಿರ್ದ್ದೆನಯ್ಯ
ಮೋಹ ಮದ ಸಮೂಹದಿಂದ ದಾಹಿಸುತ್ತ ಮಿರ್ದೆನಯ್ಯ
ದೇಹದಿಚ್ಚೆ ಮೆಚ್ಚಿ ಮಚ್ಚರಕ್ಕೆ ವೇಳೆಯಾದೆನಯ್ಯ
ನಾದಮೂರ್ತಿ ಪುಣ್ಯಕೀರ್ತಿ ಕಾಯ್ದುಕೊಳ್ಳೊ ಹಂಪೆಯರಸ
ವೇದಪಕ್ಷ ವಿಮಲವಕ್ಷ ರಕ್ಷಿಸೆನ್ನ ಹಂಪೆಯರಸ
ಆಸೆಯುಲಗು ನಚ್ಚಿ ಮೆಚ್ಚಿ ಮನವ ನುಚ್ಚು ಮಾಡಿತಯ್ಯ
ಗಾಸಿಯಾಗಿ ನೊಂದು ಬೆಂದು ಬರಿದೆ ಬಳಲುತಿರ್ದೆನಯ್ಯ
ಮನಂ ಧನಂ ಸುತರ್ಕುಲಂ ಛಲಂ ಬಲಂಗಳೆಂಬಿವೆಲ್ಲ
ಜನನಿ ಜನಕರಬಲೆ ಯೌವ್ವನಂ ಶರೀರಮೆಂಬಿವೆಲ್ಲ
ಮಿಂಚು ಮಂಜು ಕನಸು ಕರಕವೆಂಬ ತೆಱನನಱಿದುದಿಲ್ಲ
ಸಂಚಲಂ ಮರೀಚಿಕಾಜಲಂಗಳೆಂದು ಕಂಡುದಿಲ್ಲ
ಗಗನಕುಸುಮವಂಬುಲಿಪಿಯನಿತ್ಯವೆಂದು ಬಗೆದುದಿಲ್ಲ
ಮುಗಿಲ ನೆಳಲುವಿಂದ್ರಚಾಪವಚಿರವೆಂದು ಕಂಡುದಿಲ್ಲ

ನಿತ್ಯವೆಂದು ನಿರುತವೆಂದು ಹತ್ತೆಸಾಱುತಿರ್ದ್ದೆನಯ್ಯ
ಸತ್ಯವರಿಯದತ್ತಲಿತ್ತ ಸುತ್ತಿ ಬಳಲುತಿರ್ದ್ದೆನಯ್ಯ
ಅಱಿಯದರಸಿ ಮರೆದು ಮರುಗಿ ಕುರುಹುಗೆಟ್ಟೆನೆನ್ನ ಗುರುವೆ
ತೆಱಹುಗಾಣದಱುಹುಗುಂದಿ ಮರಹುಗೊಂಡೆನೆನ್ನ ಗುರುವೆ
ಮಾಯೆಯುಂ ಸಡಿಲ್ಚಿ ಕಳೆದು ಕಾಯೊ ತಂದೆ ಹಂಪೆಯರಸ
ಜೀಯ ನಿತ್ಯ ಕಾಯೊ ದೇವರಾಯ ನೋಡು ಹಂಪೆಯರಸ
ವಿಷಯವೆಂಬ ಕೆಸರೊಳ್ ಬಿಳ್ದ ಪಶುವನೆನ್ನ ರಕ್ಷಿಸಯ್ಯ
ಪಶುಪತೀ ಶಿವಾಭವಾ ಭವಾನಿಯರಸ ಕರುಣಿಸಯ್ಯ
ಶ್ರುತಿಗಳರಸಿ ಮತಿಗಳರಸಿ ಯತಿಗಳರಸಿ ಕಾಣದಭವ
ನತಜನಕ್ಕೆ ಮುಂದೆ ಬಂದು ನಿಂದು ತೋರ್ಪೆ ಕರುಣೆ ವಿಭವ

ಏಕೆ ತಂದೆ ಎನ್ನನೊಮ್ಮೆ ನೋಡಲೊಲ್ಲೆ ಹಂಪೆಯರಸ
ನಾಕಲೋಕ ಪತಿಗೆ ಪತಿ ಪಿನಾಕಪಾಣಿ ಹಂಪೆಯರಸ

ತಾಯ ಗರ್ಭದೊಳಗೆ ತಗ್ಗಿ ಕುಗ್ಗಿ ಮಗ್ಗುಲೊಳಗೆ ಮುಗ್ಗಿ
ಹೇಯವೆನ್ನುದುದರ ರಸಮನುಂಡು ಕರುಳ ಬಲೆಯೊಳೊಗ್ಗಿ
ಮಲದ ಮೂತ್ರಕುಲದ ನಡುವೆ ಕಲಷಿ ನೆಲಸಿ ತೊಲಗದಿರ್ದ್ದ
ಕೆಲ ಬಲಂಗಳರಿಯದಧಮ ಕೂಪದಲ್ಲಿ ತಾಪಿಸಿರ್ದ್ದ
ಸೆಡೆದೆ ನುಡಿದೆನಾರೆನೊಲ್ಲೆನಳ್ಕಿದೇಂ ಸಮರ್ಥ ಗುರುವೆ
ನಡೆಯದೆನ್ನನಚ್ಚ ಬಕುತಿ ಸುಖದೊಳಿರಿಸು ಪರಮ ಗುರುವೆ

ದೇವ ನತವಿತಾನ ವಿವರ ಜಲಧಿಚಂದ್ರ ಕರುಣಿಸಯ್ಯ
ದೇವಭಕ್ತನಿಕರವಿಕಸಿತಪ್ರಮೋದ ಕರುಣಿಸಯ್ಯ
ಕಮಲಜಾಂಡ ಫಲಸಮೂಹ ವಿಮಲವೃಕ್ಷ ಹಂಪೆಯರಸ
ಸಮುದಿತಪ್ರತಾನಭರಿತ ಚಿತ್ಪ್ರಕಾಶ ಹಂಪೆಯರಸ
ಸುರಸಮಾಜರಾಜರಾಜ ರಾಜಮೌಲಿ ಹಂಪೆಯರಸ
ಗಿರಿಸುತಾ ಲತಾವಿತಾನಕಲ್ಪಭೂಜ ಹಂಪೆಯರಸ
ಈಶ ವಿಗತದೋಷ ಪುಣ್ಯವೇಷ ಕರುಣಿ ಕರುಣಿಸಯ್ಯ
ಪಾಶರಹಿತ ಮುಕ್ತಿವಿಹಿತ ಭಕ್ತಿಸಹಿತ ಕರುಣಿಸಯ್ಯ

ಕಳಿದು ಮುಳಿದು ಸುಳಿದು ಹೊಳೆದು ಕಾಡಲೇಕೆ ಹಂಪೆಯರಸ
ತಿಳಿದು ಬೆಳಪ ಬಕುತಿಯಿತ್ತು ಸುಖವನೀಯೊ ಹಂಪೆಯರಸ
ಬಾಲನೊರಲುತಿರ್ದ್ದೊಡೇಕೆ ಕೇಳೆಲೊಲ್ಲೆ ಹಂಪೆಯರಸ
ಕಾಲಕಾಲ ವಿಮಲಶೀಲ ಬಕುತಿಲೋಲ ಹಂಪೆಯರಸ
ಕಣ್ಗೆ ಕಣ್ಣೆ ಮನಕೆ ಮನವೆ ಗುಣಕೆ ಗುಣವೆ ಹಂಪೆಯರಸ
ಪಣ್ಗೆ ಪಣ್ಣೆ ರಸಕೆ ರಸವೆ ಸವಿಗೆ ಸವಿಯೆ ಹಂಪೆಯರಸ
ಕುಲಕೆ ಕುಲವೆ ಛಲಕೆ ಛಲವೆ ಬಲಕೆ ಬಲವೆ ಹಂಪೆಯರಸ
ನೆಲಕೆ ನೆಲವೆ ಜಲಕೆ ಜಲವೆ ಶಿಖಿಗೆ ಶಿಖಿಯೆ ಹಂಪೆಯರಸ
ಅಸುವಿಗಸುವೆ ಅಣುವಿಗಣುವೆ ಯಾತ್ಮಕಾತ್ಮ ಹಂಪೆಯರಸ
ಶಶಿಗೆ ಶಶಿಯೆ ರವಿಗೆ ರವಿಯೆ ನಭಕೆ ನಭವೆ ಹಂಪೆಯರಸ
ಕರುಣಿ ಕರುಣವಿಲ್ಲದಂತಿರಿರ್ಪ್ಪರೇ ಉಮಾ ಮಹೇಶ
ತರುಣನಿಂತು ಶಿವದಿಡಲ್ಕೆ ನೋಡಿರ್ಪ್ಪರೇ ಮದೀಶ

ನುಡಿಯದಿರ್ದ್ದ ನೋಡದಿರ್ದೊಡೆಂತು ಬರ್ದುಂಕುವೆಂ ತ್ರಿಶೂಲಿ
ನುಡಿಸಿ ನೋಡಿ ಬದುಕಿಸೆನ್ನನಳ್ಕರಿಂ ಕಪಾಲಮಾಲಿ
ನೋಡಿ ನೋಡದಿರ್ಪ್ಪರುಂಟೆ ಕೂಡಿ ಕೂಡದಿರ್ಪರುಂಟೆ
ಮಾಡಿ ಮಾಡದಿರ್ಪ್ಪರುಂಟೆ ಬೇಡಿ ಬೇಡದಿರ್ಪರುಂಟೆ
ಒಲಿಸೆ ಪೊಲಿಯದಿರ್ಪ್ಪರುಂಟೆ x x x x .........
ಬೆರಸಿ ಬೆರೆಯದಿರ್ಪ್ಪರುಂಟೆ ಇರಿಸಿ ಇರಿಸದಿರ್ಪ್ಪರುಂಟೆ
ಭಕುತಿ ಸುಖವನೀಯದಿಹುದಿದಾವ ಹೆಂಪು ಹಂಪೆಯರಸ
ಯುಕುತಿ ಏಕೆ ಶಿಶುವಿನೊಡನೆ ಪಶುವಿನೊಡನೆ ಹಂಪೆಯರಸ

ಎನಗೆ ತಂದೆ ತಾಯಿ ಬಂಧುಬಳಗವಚಲ ಭಕ್ತಿ ನೀನೆ
ಎನಗೆ ಸುಗತಿ ಸುಮತಿ ಸೊಂಪು ಬಿಣ್ಪು ಸುಣ್ಪು ತಣ್ಪು ನೀನೆ
ತನುವಿನೊಳಗೆ ತೆಱಹುಗೊಡದೆ ತೀವಿ ನಿಲ್ಲು ಹಂಪೆಯರಸ
ಮನದ ಕಣ್ಗಳೊಳಗೆ ಸುಳಿದು ಸುಖವನೀಯೊ ಹಂಪೆಯರಸ
ಎನ್ನ ಚಿತ್ತದೊಳಗೆ ತಿಳಿದು ತೊಳಗಿ ಬೆಳಗು ಹಂಪೆಯರಸ
ಎನ್ನ ಭಾವದೊಳಗೆ ಕರುಣವೆರಸಿ ಬೆರಸು ಹಂಪೆಯರಸ
ನಿಧಿಯೆ ನಿಜವೆ ನಿಶ್ಚಲಪ್ರಮೋದ ಭಕ್ತರೊಲವೆ
ಸುಧೆಯೆ ಸೊಬಗೆ ಸಚ್ಚರಿತ್ರ ಭಕ್ತಿಭರಿತ ಭಕ್ತರೊಲವೆ
ಭವಭವಂಗಳೊಳಗೆ ತಿರುಗಿ ಬಂದು ನವೆದೆ ಹಂಪೆಯರಸ
ನವನವಾದಿ ಜನನದಿಂದೆ ನವೆದುನವೆದೆ ಹಂಪೆಯರಸ
ಹುಟ್ಟಿ ನವೆದು ನಡುವೆ ಮತ್ತೆ ಹುಟ್ಟಿ ನವೆದು ನವೆದೆನಯ್ಯ
ಹುಟ್ಟದಂತೆ ಭವವನೈದಿ ಮಾರುವೋದೆ ಕರುಣಿಸಯ್ಯ
ಪರಮ ಪುರುಷ ಲಸಿತಹರುಷ ಪುಣ್ಯ ಪುರುಷ ಹಂಪೆಯರಸ
ಗರಳಧರನೆ ದುರಿತಹರನೆ ಶರಣವರನೆ ಹಂಪೆಯರಸ

ಅಖಿಳ ಗುರುವೆ ಹಂಪೆಯರಸ ನಿಖಿಳ ಗುರುವೆ ಹಂಪೆಯರಸ
ದಾನನಿಧಿಯೆ ಹಂಪೆಯರಸ ಮಾನನಿಧಿಯೆ ಹಂಪೆಯರಸ
ವೇದರಮ್ಯ ಭಾವಗಮ್ಯ ಸಹಜ ನಿತ್ಯ ಬಹಳ ಸತ್ಯ
ಭೃತ್ಯ ಸುಲಭ ಸತ್ಯಶರಭ ಪರಶುಧರನೆ ಕರುಣೆಹರನೆ

ನೋಡು ಶಿವನೆ ನೋಡು ಭವನೆ × x x
ಬಾರ ದೇವ ಸಾರ ಹೃದಯ ಮಂಗಳಾಬ್ಧಿ ತುಂಗಲಬ್ಧಿ
ವಿಷಮನೇತ್ರ ಲಸಿತಗಾತ್ರ ಲಿಂಗಮೂರ್ತಿ ಜಂಗಮೂರ್ತಿ
ಎನ್ನ ಗುರುವೆ ತಂದೆ ಈಶ ಲಾಲಿಸಯ್ಯ ಪಾಲಿಸಯ್ಯ
ಏವೆನೀಶ ಕಾವುದೀಶ ಆಗಳಾಗಳೀಗಳೀಗ

* ಆರೆನಯ್ಯ ಆರೆನಭವ ಆರೆನಭವ ಆರೆನೆನ್ನ ಚಿತ್ಪ್ರಕಾಶ
ಅಂಧಕಾಸುರ ಪ್ರಭಂಜನ ಪ್ರಕಾಶ ಹಂಪಯರಸ
ಮರುಪಮಿತ್ರ ತೆರಣಿಯಮೃತಕಿರಣನಯನ ಹಂಪೆಯರಸ ೧೦೦

ಅತುಳ ಕಾಯ ನತ ನಿಕಾಯ
ದೇವ ಗುರುವೆ ದೇವ ವರವೆ
ದೇವ ಗತಿಯೆ ದೇವ ಮತಿಯೆ
ದೇವ ಪತಿಯೆ ಹಂಪೆಯರಸ
ಜಯತು ಜಯತು ಹಂಪೆಯರಸ
ಜಯ ಜಯ ನಮೋಸ್ತುತೆ

**ಕಂದ**

ಮೃಡನಿಮಗೆ ಭವಭವಂಗಳೊ
ಳೆಡವರಿಯದ ಭೃತ್ಯನಾದೆನದು ಕಾರಣದಿಂ
ಬಿಡದಿರ್ಬಿಡದಿ ಬಿಡದಿರ್
[ಬಿಡದಿರ್] ದಮ್ಮಯ್ಯ ಹಂಪೆಯ ವಿರೂಪಾಕ್ಷ

(ಹಂಪೆಯರಸನ ರಗಳೆ ಸಮಾಪ್ತಂ)

**ಮಂಗಳ ಮಹಾ ಶ್ರೀ ಶ್ರೀ ಶ್ರೀ**

---

* ಈ ಮೂರು ಚರಣಗಳು ಪ್ರತ್ಯೇಕ ಹೆಚ್ಚಿಗೆ ದೊರೆತಿವೆ

# ಈಶ್ವರ ಮಹಿಮೆಯ ರಗಳೆ

## ೪

## [ ಶಿವಾಧಿಕ್ಯ ನಿರೂಪಣೆ ]

ವೃತ್ತ ॥

ವೇದದೊಳುಂ ಪುರಾಣನಿಕರಂಗಳೊಳುಂ ಘನಶಾಸ್ತ್ರವೃಂದದೊಳ್
ವಾದಿನೊಳುಂ ಸ್ಮೃತಿಪ್ರಕರದೊಳ್ ಸಕಲಾಗಮಮಂತ್ರ ತಂತ್ರದೊಳ್
ಮೇದಿನಿಯೊಳ್ ಪುರಾತನ ಕುಲಂ ನೆಱೆ ತೋಱಿದನೇಕ ದೃಷ್ಟದೊಳ್
ವಾದಮಯಂ ಮಹೇಶನೆ ಘನಂ ಘನವೆಮ್ಮಯ ಹಂಪೆಯೀಶ್ವರಂ ೧

ಜಲಜಾಕ್ಷಾಕ್ಷಿ ವಿಶಾಲಪಾದನೆ ಘನಂ ಚಂಡಾಂಶುರಾತ್ರೀಶ್ವರಂ
ಜ್ವಲನಾಕ್ಷಿತ್ರಯನಕ್ಷಯಂ ಸಾರಶಿರೋಮಾಲಾ ವಿಶಾಲಂ ಘನಂ
ಗಳದೊಳ್ ಕ್ಷ್ವೇಳಮನಿಟ್ಟ ಶಂಭುವೆ ಘನಂ ಕೇಳತ್ಯತಿಷ್ಠದ್ದಶಾಂ-
ಗುಲನೆಮ್ಮ ಪ್ರಭು ಹಂಪೆಯಾಳ್ದನೆ ಘನಂ ಬ್ರಹ್ಮಾಂಡ ಸಂತಾನದೊಳ್ ೨

ಲಲಿತರಗಳೆ :

ಶ್ರೀಪರಮಗುರು ಶಂಕರಪ್ರಭುವಿನಂಘ್ರಿಯೊಳ್
ಭಾಪುರಯೆನೆ ನೆಗಳ್ದನಾ ಮಾದಿರಾಜಾಂಘ್ರಿಯೊಳ್
ಶ್ರೀಗುರು ಮಹಾದೇವರಾಜ್ಞೆಯಂ ಕೈಕೊಂಡು
ಬಾಗಿ ಹಂಪೆಯ ವಿರೂಪಾಕ್ಷನ ವರಂಗೊಂಡು
ಹೇಳಲುದ್ಯೋಗಿಸಿದೆನೀಶ್ವರನ ಮಹಿಮೆಯಂ
ಭಾಳಾಕ್ಷನೇ ಘನಂ ಘನವೆನಿಪ ಮಹಿಮೆಯಂ
ಆದಡೆನ್ನಕ್ಕರಂ ಬಲ್ಲಂತೆ ಬಣ್ಣಿಪೆಂ
ಆದಿಯ ಪುರಾತನರು ಒಲಿಸಿದುದನೆಂದಪೆಂ

ಸಕಲವೇದಂಗಳುಂ ಬೊಬ್ಬಿಟ್ಟುದುಂಟಾಗಿ
ಸಲಕಮುಖದಿಂ ಬಣ್ಣಿಸುತಿಪ್ಪುದುಂಟಾಗಿ
ಅದು ಕಾರಣಂ ಗುರು ವಿರೂಪಾಕ್ಷನೇ ಘನಂ
ಸದಮಲಂ ಪಂಪಾ ವಿರೂಪಾಕ್ಷನೇ ಘನಂ
ಅಪ್ರತಿಮನನಘನಹಿಕಂಕಣನೇ ಘನಂ
ಅಪ್ರತಿಹತ ಪ್ರತಾಪಪ್ರಕರನೇ ಘನಂ
ಅತ್ಯತಿಷ್ಠದ್ದಶಾಂಗುಲನಪ್ರತಿಮನೆಂದು
ನಿತ್ಯನೇಕೋರುದ್ರನದ್ವಿತೀಯನೆಂದು
ಪರಮನ ನಮಸ್ಕಾರಮಾಲೆಗೆ ನಮೋ ಯೆಂದು
ಹರನ ಚರಣಕ್ಕೆ ಕರುಣಕ್ಕಂ ನಮೋಯೆಂದು
ಹರಿಗುಂ ಹರಂತಿಯೆಂದಭವನೇ ಪತಿಯೆಂದು
ಹರನೆಲ್ಲವಂ ತೀರ್ಚಿ ಕಳೆದನಿತು ದಿಟವೆಂದು
ಸರ್ವಮನ್ಯತ್ಪರಿತ್ಯಾಜ್ಯಮೆನೆ ಶಿವನೆಂದು
ಸರ್ವಗುರು ಧರೆಗೆ ಭರ್ಗೋದೇವನೇಯೆಂದು

ಇನ್ನುಂ ಪುರಾಣದೊಳು ಮಹಿಮೆಯುಂ ಬಣ್ಣಿಪೆಂ
ಪನ್ನಗಾಭರಣನಾಧಿಕ್ಯಮಂ ಪೇಳ್ದಪೆಂ
ಹರಿಯಜರ ನಡುವೆ ಹರನುರಿಲಿಂಗವಾದುದಂ
ಹರಿಬ್ರಹ್ಮರರಸಿ ಕಾಣದೆ ನಿಂದರೆಂಬುದಂ
ಅಂದೊಮ್ಮೆ ಹರಿಯೊಡನೆ ಹುಸಿನುಡಿದ ಬ್ರಹ್ಮಂಗೆ
ಒಂದೊಡೆಯೊಳುಂ ಸ್ಥಾನವಿಲ್ಲ ನೋಡಾಂತಗೆ
ಮರೆದಹಂ ಬ್ರಹ್ಮಾಸ್ಮಿಯೆಂದ ಬ್ರಹ್ಮನ ಶಿರಂ
ಹರಿದು ಹೋದುದು ರುದ್ರನಿಂದಲಂತದು ಕರಂ
ಪೋಗೆ ಸೋಮಾಷ್ಟಕವನಲ್ಲಿ ಬಿನ್ನಯಿಸುತುಂ
ವಾಗೀಶನತಿ ದೈನ್ಯದಿಂದ ಮಿಗೆ ಪೊಗಳುತುಂ
ಇರಲಾತನಿಚ್ಛೆಯಂ ಸಲಿಸಿ ಶಿರವಂ ಪಿಡಿದು
ಅರರೆ ಕಾಪಾಲಿ ಲೀಲಾಮಾತ್ರದಿಂ ನಡೆದು

ಭಿಕ್ಷುಕನವೇಷಮಂ ನಟಿಯಿಸುತ್ತಯಿತಂದು
ಮೋಕ್ಷದಿಂ ದ್ವಾರಾವತಿಗೆ ನಲಿದು ಬರಲಂದು
ಬರಲು ವಿಷ್ವಕ್ಸೇನನಡ್ಡಬರೆ ಕಾಣುತುಂ
ಹರನಾ ತ್ರಿಶೂಲದಿಂದಿರಿದೆತ್ತಿ ನೆಗೆಪುತುಂ
ಒಳಹೊಕ್ಕು ಬರುತಿರಲು ನಾರಾಯಣಂ ಕಂಡು
ಇಳಿಪುವೆಂ ಪಾತ್ರೆಯನೆನುತ್ತಂ ಮನಂಗೊಂಡು
ತನ್ನ ಶಿರದರುಣ ಜಲಮಂ ಪಾತ್ರೆಯೊಳ್ಕರೆಯೆ
ತನ್ನಿಂದ ನೂರ್ಮಡಿಸಿ ಪಾತ್ರೆ ಬೆಳದತಿ ಮೆರೆಯೆ
ಅಂಗದೋಳ್ನಾರವರೆತಡಿಗೆರಗಿ ನೋಡುತುಂ
ಅಂಗಜಹರಂ ಕರುಣದಿಂದೆ ಪಿಂಡಿದೆತ್ತುತುಂ
ನಡೆದನೆಂದೀ ಪುರಾಣಪೆರೆದು ಸಾರುತ್ತಮಿರೆ
ಒಡೆಯನೀಶ್ವರನೆಂದು ಸೊಡರ್ವಿಡಿದು ತೋರುತಿರೆ

ಅದರಿಂದ ಪಂಪಾವಿರೂಪಾಕ್ಷನೇ ಘನಂ
ಮದನಹರನೆಮ್ಮಯ ವಿರೂಪಾಕ್ಷನೇ ಘನಂ
ಮತ್ತಂ ವಿಚಾರಿಪೊಡೆ ಹರಿ ಸಹಸ್ರಾಬ್ಜದಿಂ
ಅತ್ತಿತ್ತ ಚಲಿಸದರ್ಚಿಸುತಮಿರೆ ಸತ್ಯದಿಂ
ಒಂದು ಹೂ ಕುಂದಿದೊಡೆ ತನ್ನ ನಯನಾಬ್ಜಮಂ
ತಂದಿಕ್ಕಿ ಹೋದ ಹೂವಿಂಗೆ ಹೊಸಕಮಳಮಂ
ಚಕ್ರಮಂ ಹರನಿತ್ತ ನಂದಿಂದು ಮೊದಲಾಗಿ
ಚಕ್ರಧರನಾದನೀ ಭೂತಳಕೆ ಪೆಸರಾಗೆ

ಇಂತೆಮ್ಮ ಪಂಪಾ ವಿರೂಪಾಕ್ಷನೇ ಘನಂ
ಅಂತ್ಯಕಾಲದಿ ರುದ್ರ ಭೂಮಿಗೊಯ್ಯೆಂದೆಂಬಂ
ಭ್ರಾಂತೇಕೆ ರುದ್ರಗಣಂಗಳಿಗಿಕ್ಕಿ ಮುನ್ನೆಂಬ
ಪಿತೃಕೃತ್ಯದಲಿ ವಿಶ್ವೇದೇವ ಮೊದಲೇಕೆಂಬ
ಪಿತೃತೃಪ್ತಿ ರುದ್ರಪಾದದತ್ತ ಮಸ್ತೆಂಬ
ಉಪನಯನ ವೈವಾಹಕಂ ನಂದಿಮುಖವೆಂಬ

ಸುಪಥವದು ಸರ್ವಕ್ಕೆ ಶಾಶ್ವತಂ ಶಿವನೆಂಬ
ಇಂತು ಸರ್ವೋರ್ವಿಯೊಳು ಶಿವಸಮಯದೇ ಘನಂ
ಇಂತು ತ್ರಿಪುರಾಂತಕನ ಸಾಮರ್ಥ್ಯವೇ ಘನಂ
ದೇವಾಲಯದೊಳು ಹರಿ ಪರಿವಾರವಾಗಿಪ್ಪ
ನಾನಾರ್ಥದಿಂ ಹರನ ಕಿಂಕರಂ ತಾನಪ್ಪ
ಅವನಿಯೊಳ್ಪಳೆ ದಿವ್ಯ ಉಳಿದ ದೇವರೊಳಿಲ್ಲ
ಶಿವಸಮಯವೇ ಶರಣು ಪರಸಮಯಿಗಳಿಗೆಲ್ಲ
ಎಲ್ಲ ದೇವರ್ಗೆ ತಂತಮ್ಮ ಶಿರದೊಳು ಪೂಜೆ
ಇಲ್ಲಿ ಮದನಾರಿಗರರೇ ಲಿಂಗದೊಳು ಪೂಜೆ

ಇಂತು ವಿರೂಪಾಕ್ಷನೇ ದೇವರೊಳ್ ಘನಂ
ಎಂತುಂ ಮಹಾದೇವನೇ ವೇದದೊಳ್ ಘನಂ
ಮಾತೆ ಪಾರ್ವತಿ ತಂದೆ ಶಿವನಲ್ಲದಿನ್ನಿಲ್ಲ
ಏತಕ್ಕೆ ಬರಿದೆ ಗಳಹಲ್ಬೇಡ ಮತ್ತಿಲ್ಲ
ಆದಕೆ ಕುರುಪೆಲ್ಲಗ್ಗೆ ಲಿಂಗಾಂಕಿತಂ ನೋಡ
ಆದಕೆ ಕುರುಹೆಲ್ಲಗ್ಗೆ ಶಕ್ತ್ಯಾಂತಿಕಂ ನೋಡ
ಹಲವು ಮಾತೇತಕ್ಕೆ ವಶವೆ ಶಿವನುನ್ನತಂ
ಎಲೆಲೆ ವೇದಾಗಮ ಪ್ರತತಿಗತ್ಯೂರ್ಜಿತಂ
ವೇದದೊಳು ಶಾಸ್ತ್ರದೊಳು ನಾದಮಯನೇ ಘನಂ
ವಾದದೊಳು ವಚನದೊಳು ವೇದಮಯನೇ ಘನಂ
ಆಗಮ ಪುರಾಣದೊಳು ನಾಗಕಟಕನೆ ಘನಂ
ಚಾಗದೊಳು ಚರಿತದೊಳು ಚಂದ್ರಧರನೇ ಘನಂ
ಮಂತ್ರದೊಳು ತಂತ್ರದೊಳು ಮಂತ್ರಮಯನೇ ಘನಂ
ಯಂತ್ರದೊಳು ಯಾಗದೊಳು ಸ್ವಾತಂತ್ರನೇ ಘನಂ

ಅಂತಿಂತು ವೆಂತುವುಂ ವಿರೂಪಾಕ್ಷನೇ ಘನಂ
ಕಂತುಹರನೆಮ್ಮಯ ವಿರೂಪಾಕ್ಷನೇ ಘನಂ
ಎಂದಿಂತು ಪೇಳ್ದಪೆಂ ಮಹಿಮಾವಲಂಬಮಂ

ಇಂದುಧರ ನಮ್ಮ ಸಂದೇಹ ಸಾಮರ್ಥ್ಯಮಂ
ಹರಿ ಬೊಮ್ಮರರಸಿ ಕಾಣರು ದೇವ ಎನ್ನಳವೆ
ನೆರೆದ ವೇದಪ್ರಕರವರಿಯುವೆನಲೆನ್ನಳವೆ
ಸ್ತುತಿಯಿಸುವ ಸೆವದಿಂದ ನಿಂದಿಸಿದನೆನಬೇಡ
ನುತಿಯ ಪವಣಿಂಗೆಯಾಂ ಮಹಿಮನೆಂದೆನಬೇಡ
ಆದಡೆನ್ನಯ ತಪ್ಪನೊಪ್ಪವಿಡುವುದು ತಂದೆ
ಆದಿಯ ಪುರಾತನರ ತೊತ್ತೆಂಬುದೆಲೆ ತಂದೆ
ದೇವ ದೇವರಗತಿಯೆ ದೇವ ದೇವರ ಮತಿಯೆ
ದೇವ ದೇವರ ಮತಿಯೆ ದೇವ ದೇವರ ಪತಿಯೆ

ರಕ್ಷಿಸು ವಿರೂಪಾಕ್ಷ
ಶಿಕ್ಷಿಸು ವಿರೂಪಾಕ್ಷ
ಲಾಲಿಸು ವಿರೂಪಾಕ್ಷ
ಪಾಲಿಸು ವಿರೂಪಾಕ್ಷ
ದಯಗೆಯ್ ವಿರೂಪಾಕ್ಷ
ಭಯಹರ ವಿರೂಪಾಕ್ಷ
ಜಯಜಯ ವಿರೂಪಾಕ್ಷ
ಜಯತು ಜಯ ನಮಸ್ತೇನ್ನಮಃ

ಕಂದ ||

ಆವನ ಪತಿ ಜಗಪಾವನ
ಆವನ ವಾಹನದಿ ಜಗವು ಜೀವಿಸುತಿರ್ಪ್ಪುದು
ಆವನ ಕಣ್ಣಿಂ ಕಾಂಬುದು
ದೇವ ವಿರೂಪಾಕ್ಷಗಲ್ಲದಿತರರ್ಗುಂಟೇ ||

( ಶಿವಮಹಿಮಾ ಸ್ತೋತ್ರ[ ಶಿವಾಧಿಕ್ಯ ನಿರೂಪಣೆ ]ಸಂಪೂರ್ಣಂ )

ಮಂಗಳಮಹಾ ಶ್ರೀ ಶ್ರೀ ಶ್ರೀ

# ಶ್ರೀ ವೀರಭದ್ರದೇವರ ರಗಳೆ

## [ ದಕ್ಷಾಧ್ವರದ ರಗಳೆ ]

**ಕಂದ ||**

ಪಿರಿದುಂ ಬಗೆಯದೆ ದಕ್ಷಾ
ಧ್ವರಮಂ ನಿರ್ಧೂಮಧಾಮಮಂ ಮಾಡಿ ಸುಧಾ
ಕರಧರನ ವಿರೂಪಾಕ್ಷನ
ಚರಣವನೈತಂದು ವೀರಭದ್ರಂ ಕಂಡಂ ||

**ಲಲತ ರಗಳೆ**

ಶ್ರೀ ರಜತತಗಿರಿಯೊಳೊಪ್ಪುವ ಸಭಾನಿಳಯದೊಳ್
ಮಾರಾರಿ ಹಂಪೆಯ ವಿರೂಪಾಕ್ಷನೊಪ್ಪದೊಳ್
ಭೂತೇಶನಪ್ರತಿಮರೂಪನೊಪ್ಪುತ್ತಿರ್ದ-
ನಾತನೊಡ್ಡೋಲಗವನೇನೆಂಬೆನೆಸೆದಿರ್ದ
ಲಕ್ಷ್ಮೀ ಸರಸ್ವತಿಯರಿಂತೊಸೆದು ಚಾಮರವಿಕ್ಕೆ
ಸುಕರದಿಂದಿದ್ರಾಣಿ ನಲಿದು ಸೀಗುರಿಯಿಕ್ಕೆ
ರಂಭೆಯೂರ್ವಸಿ ತಿಲೋತ್ತಮೆ ಮಂಜುಘೋಷೆಯರ್
ಶಂಭುವಿನ ಕೆಲಬಲದೊಳೊಪ್ಪುವತಿ ನೀಱೆಯರ್
ತರದಿಂದೆ ವಾರವನಿತೆಯರ್ಪಲರ್ಕುಳ್ಳಿರಲ್
ಸುರಕನ್ಯಯರ್ಸಮುಚಿತಾಸನದೊಳೊಪ್ಪಿರಲ್
ಪರಶುಧರನು ತಾರಕಾರಿಯುಂ ಬಂದಿರಲ್
ಸರಸಿಜಭವಂ ಸರಸಿಜೋದರಂ ಬಂದಿರಲ್
ಕೆಲಬಲದೊಳೊಪ್ಪಿರ್ದರಮರಗಣನಾಯಕರ್
ಛಲಿಗಳಪ್ರತಿಮರತಿರಥ ರುದ್ರನಾಯಕರ್

ಸಚರಾಚರವನಳಿವ ಮಾಡುವಾಟದ ಕಿಱಿಯ-
ರಚಳರಭವರ್ತಮತಮಗೆ ಮುಖ್ಯರತಿಬಳರ್
ಕಂತುಹರನಾಪ್ತ ಪರಿವಾರದಿಂದೆಸೆದಿರಲ್
ಸಂತತಂ ಪರಮಂಗೆ ಪರಮಬಂಧುಗಳೆನಿಪ
ನೆನೆವ ಮನವೀವ ಕೈವಿಡಿವ ಕೈದುಗಳೆನಿಪ
ತನಿನೇಹದೊಳ್ನೆರೆವ ಕಡು ಬಾಕುಳಿಗಳೆನಿಪ
ಪುರಮಂ ಕ್ಷಣಾರ್ಧದೊಳ್ಸುಟ್ಟುರುಹಿದರ್ಕೆಲರ್
ಶರಭರೂಪಾಗಿ ತಲೆದಂದ ಶರಣರ್ ಕೆಲರ್
ಲೀಲೆಯಿಂ ಮನಸಿಜನನುರುಪಿದರ್ಕೆಲರ್
ಕಾಲನಂ ಕೋಪದಿಂ ಸುಟ್ಟವರ್ಕೆಲರ್
ಸಿಡಿಲ ಬಳಗಮನೊಂದುಗೂಡಿ ಗಡಣಿಸಿದಂತೆ
ಮೃಡನತಿಬಲಂ ಬೇಱೆ ಬೇಱೆ ರೂಪಾದಂತೆ
ಕೆಲರು ಸಾಲೋಕ್ಯದರ್ಕೆಲರು ಸಾಮೀಪ್ಯದರ್
ಕೆಲರು ಸಾರೂಪ್ಯದರ್ಕೆಲರು ಸಾಯುಜ್ಯದರ್
ಪೊಗಳಲೆನ್ನಳವೆ ವಿರೂಪಾಕ್ಷ ನಿನ್ನಣುಗರಂ
ಬಗೆಗಗೋಚರವೆನಿಪ ಶಿವಲಿಂಗ ಸೊಬಗರಂ

ಇಂತೆಸೆವ ನಂದೀಶ್ವರಾದಿ ಗಣತತಿ ಬಂದು
ಕಂತುಹರನಿಕ್ಕೆಲದೊಳೆಸೆಯೆ ನಲವಿಂ ನಿಂದು
ಸೊಗಯಿಪ ದಧೀಚಿ ದೂರ್ವಾಸ ಕಸ್ಯಪರೆಂಬ
ಭೃಗು ಭಗೀರಥ ಜಹ್ನು ಜಮದಗ್ನಿ ಶುಕರೆಂಬ
ಜೈಮಿನಿ ವಶಿಷ್ಠ ಮಾರ್ಕಾಂಡ್ಯ ಕಪಿಲರುಮೆಂಬ
ರೋಮಜನು ಜಾಬಾಲಿ ಗಾರ್ಗ್ಯ ಗೌತಮರೆಂಬ
ತರತರದೊಳೊಪ್ಪುವ ರಾಜಋಷಿ ದೇವಋಷಿಗಳುಂ
ಪರಮ ಕಾರಣಿಕರೆನಿಪ ಬ್ರಹ್ಮಋಷಿಗಳುಂ

ಇಂದ್ರಾಗ್ನಿ ಯಮ ನಿರುತಿ ವರುಣ ವಾಯುವ್ಯರುಂ
ಚಂದ್ರ ಈಶಾನ್ಯರೆನಿಪರ್ ಸಭೆಗೆ ಸೇವ್ಯರುಂ

ಎಸೆವ ಕಿನ್ನರ ಸಿದ್ಧರ ಮೊತ್ತವದು ಬೇಱೆ
ಪೆಸರ ಗರುಡರ ಖೇಚರರ ಮೊತ್ತವದು ಬೇಱೆ

ಇರೆ ಸುರಾಸುರರ ವಿದ್ಯಾಧರರ ವೀಥಿಯೊಳು
ನೆರೆದ ಗಂಧರ್ವರ ಫಣೀಶ್ವರರ ಪಙ್ಕ್ತಿಗಳು
ಮೆಱೆಯಲಜಕೋಟಿ ಪಂಕಜನಾಭ ಕೋಟಿಗಳು
ತುಱುಗೆ ರವಿಕೋಟಿ ಶಶಿಕೋಟಿಗಳು ಶಿಖಿಕೋಟಿಗಳು
ಎಸೆವುತಿರೆ ಸಾಲಿಟ್ಟು ಮಕುಟಂಗಳೊಂದು ದೆಸೆ
ಒಸೆದೊಸೆದು ಕೈಮುಗಿವ ಯಕ್ಷತತಿಯೊಂದು ದೆಸೆ
ಕಿವಿಗೊಡುವುದೆಮಗೆಂಬ ನಾದಂಗಳೊಂದು ದೆಸೆಯು
ತವಕದಿಂ ತುತಿಯಿಸುವ ವೇದಂಗಳೊಂದು ದೆಸೆಯು
ಧರೆ ಜಲಂ ಸಪ್ತಾರ್ಚಿ ವಾಯುವಾಕಾಶದಿಂ
ಖರಕಿರಣ ಹಿಮಕರಣ ರಾತ್ಮಸಂತಾನದಿಂ
ಪರಮ ಶಾಂತಿಯೊಳೊಪ್ಪುವಾತ್ಮ ಸಂತಾನದಿಂ

ಬೆಸವೇಳ್ದುದಂ ಬಯಸುವಣಿಮಾದಿ ನಿಕರದಿಂ
ಬೆಸಸು ಬೆಸಸೆಮ್ಮನೆಂದೆಂಬ ಸಾಮರ್ಥ್ಯ ಮೊತ್ತದಿಂ
ಪವಣಿಸುವಡರಿದೆನುತ್ತಿರ್ಪ್ಪ ಶಾಸ್ತ್ರಂಗಳಿಂ
ತಮತಮಗೆ ಪೊಗಳುತೊಪ್ಪುವ ಪುರಾಣಂಗಳಿಂ
ಮೌನದಿಂ ನಿಂದಿರ್ಪ್ಪ ತರ್ಕಸಂಮೋಹದಿಂ
ಧ್ಯಾನಿಸುತಿರ್ಪ್ಪ ಸಕಲಾಗಮವ್ಯೂಹದಿಂ
ಹತ್ತೆ ಸಾರ್ದೋಲೈಪ ಚೆಲ್ವುಗಳ ಮೊತ್ತದಿಂ
ಮುತ್ತಿಬಂದೋಲೈಪ ಸಕಲಸುಖನಿಕರದಿಂ
ತರತರಂಗೊಂಡಿರ್ಪ್ಪ ಪುಣ್ಯ ಸಂತಾನದಿಂ
ನೆರೆದುಂ ಬಯಸುತಿರ್ಪ್ಪ ಬಯಕೆಗಳ ಮೊತ್ತದಿಂ
ಒಲಿದುಘೇ ಉಘೇಯೆಂಬ ಜಯ ಜಯ ಧ್ವಾನದಿಂ
ಸಲೆ ಕೈಯ್ಗಳಂ ಮುಗಿವ ವೀರಗಣನಿವಹದಿಂ

ಕಡಗಡೆಯೊಳೋಲಯಿಸುತಿರ್ಪ್ಪ ಜಾಣ್ನುಡಿಗಳಿಂ
ಮೃಡನ ತೋಳ್ಗಳನೋಲಗಿಪ್ಪ ಜಯತತಿಗಳಿಂ
ಚರಣಮಂ ಪಿಡಿತರ್ಪ್ಪ ಮಂಗಳದ ಪಙ್ಕ್ತಿಯಿಂ
ಹರವರಿಯೊಳುರಿವ ರಿವ ತೇಜಂಗಳಿಕ್ಕೆಯಿಂ
ಕಡೆಗಂಗಳಂ ಬಯಸುತಿರ್ಪ್ಪ ಕಾರುಣ್ಯದಿಂ
ಮೃಡನ ವರವಂ ಪಾರ್ದು ನಿಂದಿರ್ಪ್ಪ ಭಾಗ್ಯದಿಂ
ಎನಗೆ ತನತೆನುತಿರ್ಪ್ಪ ಭೋಗಂಗಳೊಗ್ಗಿನಿಂ
ತನತನಗೆ ನಲಿವ ಗಣಪದವಿಗಳಗುರ್ವ್ವಿನಿಂ
ನಿರ್ವ್ವಿಕಾರದೊಳಿರ್ಪ್ಪ ಶಾಂತಿಗಳ ಪಙ್ಕ್ತಿಯಿಂ
ಶರ್ವ್ವನಂ ಬಯಸುತಿಹ ಮಂಗಳದ ಪಙ್ಕ್ತಿಯಿಂ
ಬೆಳಗನುಗುಳುತಿರ್ದ್ದ ಕಾಂತಿಗಳ ಬಳಗದಿಂ
ತಿಳಿಯಲೆಂದಿರ್ದ್ದಖಿಳ ವಿದ್ಯಾ ಸಮೂಹದಿಂ
ಸಾರೆ ಬಂದೋಲಗಿಸಲೆಂದಿರ್ದ್ದ ನಿತ್ಯದಿಂ
ಕಾರುಣ್ಯಮಂ ಬಯಸಿ ಬಂದಿರ್ದ್ದ ಸತ್ಯದಿಂ

ಇಂತು ಸಕಲೈಶ್ವರ್ಯದುನ್ನತವನೊಳಕೊಂಡ-
ನಂತಂಗೆ ಪೊಗಳಾಱದ ಘನವನೊಳಕೊಂಡ-
ದೆಂತೆಂದುಪಮೆಗಗ್ಗಳವಾದುದಾಸ್ಥಾನ-
ವಂತಂತು ಮೆಱೆದುದು ವಿರೂಪಾಕ್ಷನಾಸ್ಥಾನ

ಆ ಸಮಯದೊಳು ದಂಡಧರರೆಂಬ ಭಟರಲ್ಲಿ
ವಾಸವನೆ ನುಡಿಬೇಡ ಸಂತವಿರು ನೀನಿಲ್ಲಿ
ಕಾಯ್ಪನುಡಗಗ್ನಿ ಹೆಱಸಾರ್ಕಾಲ ಕೌಣಪನೆ
ಸಯ್ಪಿನೊಳಿರು ಜಳಧಿಪನೆ ಸುಳಿಯದಿರ್ಮಾರುತನೆ
ತೆಱಹುಗುಡು ಗಂಧರ್ವರಾಜ ಕಿನ್ನರಪತಿಗೆ
ಒಱೆದೆ ಗಳಪದಿರೆಲವೊ ಬೊಮ್ಮ ನಿನ್ನುತಿಗೆ
ಬಿನ್ನವಿಸು ಮುನ್ನಣೆಯ ವನಜಾಕ್ಷ ಕೈಮುಗಿದು
ನಿನ್ನ ಹೆಡೆಗಳನುಡಿಗಿನಿಲ್ಲಹಿಪ ಹೆಱಸಾರ್ದ್ದು

ಕಳಕಳವಿದೇಕೆ ಹೆಱಿಸಾವರ್ಣಣು ಹೋ ಯೆಂದು
ಆಳವಲ್ಲ ಸಂತಯಿಸಬಾರದಾಹಾ ಯೆಂದು
ಇವನಾವ ಬೊಮ್ಮಾಂಡದಬುಜಜಂ ತಾನೆಂದು
ಇವನಾವ ಬೊಮ್ಮಾಂಡದಬುಜೋದರಂ ಯೆಂದು
ಆವಾವ ಸಗ್ಗದವರಿಂದ್ರರ್ಕಳಿವರೆಂದು
ಆವಾವ ಲೋಕದವರೀ ಮಹಾನೃಪರೆಂದು
ಇಂತು ತವೊಮ್ಮಳ್ಪಡಿಯರರ್ ನುಡಿವ ಸಮಯದೊಳ್
ಮುಂತೆ ತುಂಬುರ ನಾರದರ್ಮಧ್ಯ ರಂಗದೊಳ್
ನವ ವೀಣೆಯಿಂದೆ ಬಹು ಸುಗತಿ ಸ್ವರಂಬಡೆಯೆ
ವಿವಿಧ ರಾಗಂಗಳಾಜ್ಞಾಶಕ್ತಿಗಳ್ತಡೆಯೆ
ಕೆಯ್ಗೆಯ್ದು ಮನವಾದ ತೆಱದಿ ಬಾಜಿಸುತಮಿರೆ
ಸುಯ್ಗಳಂ ಮಱಿದೋಲಗಂ ನಾಡೆ ಕೇಳುತಿರೆ
ಇಂತು ತುಬುರನಾರದರ್ವಿರೂಪಾಕ್ಷನಂ
ಸಂತಸದೊಳೋಲಗಿಸುತ್ತೆ ಅಷಮಾಕ್ಷನಂ
ಕೇಳಿಸಿದನಂತರಂ ಕಿನ್ನರರ್ಸವಿಗೂಡಿ
ಮೇಳಯಿಸುತಾರ್ಯೆಸಿ ಸಭೆಗೆ ಹರುಷಂ ಮೂಡಿ

ಮನದೊಳಂ ಕಾಂತಿಯುಂ ಸರವಡಗದಂದದಿಂ
ಕೊನೆ ಮಿಂಚಿನೋಳ್ಕಾಂತಿಲತೆ ಹುಟ್ಟಿದಂದದಿಂ
ಭೋರಯಿಸಿ ರಾಗಂಗಳಂ ಕಱಿವ ಮಾಳ್ಕೆಯಿಂ
ಪಾರಯಿಸಿ ನೆರೆದ ಸಭೆ ಕರುವಿಟ್ಟ ಮಾಳ್ಕೆಯಿಂ
ಕಿವಿಯೊಡ್ಡಿ ಕೇಳುತಿರೆ ಚಿತ್ತಮಂ ಬಳಿಸಲಿಸಿ
ಕಿವಿಯ ಬಳಿಸಂದವಿಂದ್ರಿಯಚಯಂ ಸಂದಣಿಸಿ
ಸಭೆಯೊಂದೆ ಮನವಾದ ಮಾಳ್ಕೆಯಿಂ ಕೇಳುತಿರೆ
ಅಭವನಂ ಸುಖದ ಮಱಿಹಲ್ಲಲ್ಲಿ ನೆರೆವುತಿರೆ
ಇಂತು ಮುನ್ನಿನ ತೆಱದೊಳಿರ್ದ್ದುದಾ ದೇವಸಭೆ
ಆಂತಿರ್ದ್ದುದಾಗಳೆ ಶೀವಿಡುವ ಪರಮಸಭೆ

ಇಂತು ಸಭೆಯಂ ಸುಖದ ಸೈವೆಱಗಿನೊಳ್ನಿಲಿಸಿ
ಸಂತಸದಿ ನಾದರಸದೊಳ್ಚಿತ್ತವಂ ಸಲಿಸಿ
ರಾಗದಿಂ ಕಿನ್ನರರ್ಪಾಡಿ ತಮ್ಮೊಳ್ಮೆಱೆಯೆ
ರಾಗಂಗಳಿಂದಮೃತನಾದಂಗಳಂ ಕಱೆಯೆ
ತನತನಗೆಸೆವ ಮಧ್ಯಮಾದಿ ಭೂಪಾಳಂಗ-
ಳನುರಾಗದಿಂದೆ ದೇಶಾಕ್ಷಿ ಪಳಮಂಜರಿಗ-
ಳಾದಿಯಾಗಿರ್ದ ಬಹು ರಾಗಂಗಳಲ್ಲಲ್ಲಿ
ವಾದಿಸಿಂ ಕೇಳಿಸೆ ಹರಂ ಸುಖದೊಳಿರಲಲ್ಲಿ
ನಾದದುನ್ಮತ್ತವಾದುದು ದೇವಸಭೆಯೆಲ್ಲ
ನಾದಮೂರುತಿಯಾದ ನಮ್ಮ ಗಿರಿಜೆಯ ನಲ್ಲ-
ನೇನೆಂಬೆನೋಲಗಂ ಜೊನ್ನದೊಳಗಾಳ್ದಂತೆ
ಜೇನಯ್ಯ ಸರಸಿಯೊಳಗೀಸಾಡುತಿರ್ದಂತೆ
ಸುರಕುಜಸುಧಾರಸದ ಮಡುವಿನೊಳಗಿರ್ದಂತೆ
ಹರುಷದಿಂ ಪಾಲ್ಗಡಲ ನಡುವೆ ಕುಳ್ಳಿರ್ದಂತೆ
ರಾಗರಸದೊಳಗೆ ಮುಳುಗಿರ್ದುದೊಡ್ಡೋಲಗಂ
ರಾಗರೂಪಾಗಿರ್ದನಭವ ಸುಖಮೂಲಿಗಂ

ಇರಲಿತ್ತ ಹಂಸೆಗಳು ಚಕ್ರವಾಕಗಳಿರ್ಪ್ಪ
ಸರಸಿಗೆ ಬಕಂ ನೋಡಲೆಂದು ಮೆಲ್ಲನೆ ಬರ್ಪ್ಪ
ತೆಱದಿಂದೆ ಬಂದು ದಕ್ಷಂ ಸಭೆಯಮುಂದೆ ನಿಲೆ
ಕಱೆಗೊರಲನವನನೀಕ್ಷಿಸದೆ ಮುಖದಿಂದೆ ಸಲೆ
ಮಱೆದು ಕೇಳುತ್ತಿರಲ್ಮನ್ನಿಸನಳಿಯನೆಂದು
ಪೊರಮಟ್ಟನಭವನಂ ಮುಳಿದು ನಿಂದಿಸುತಂದು
ಪರಮಾಣು ಮೇರುವಿನ ಪೆಂಪಿಂಗೆ ಮುಳಿವಂತೆ
ಸರಸಿ ಸಾಗರದ ಗಾಂಭೀರ್ಯಕ್ಕೆ ಮುಳಿವಂತೆ
ತಱಗೆಲೆ ದವಾನಳನ ಕಾಯ್ಪಿಂಗೆ ಮುಳಿವಂತೆ
ಕಱಹ ಕಲ್ಪದ್ರುಮದ ಸಂಪದಕೆ ಮುಳಿವಂತೆ

ಇರದೆ ಮಿಂಚುಬುಳು ದಿನೇಶಂಗೆ ಮುಳಿವಂತೆ
ಪುರಹರಂಗಕಟಕಟ ದಕ್ಷಂ ಮುಳಿವುತ್ತಿಂತೆ
ಬರುತ್ತೆಂದನೆನ್ನನವಮಾನವನು ಮಾಡಿದನ-
ನಿರದೆ ಭಂಗಿಸುವೆ ನಾನಯಿದೆ ಹೆಱಿಸೂಡಿದನ
ಎಂದು ಘಳಘಳನೆ ತನ್ನಾಶ್ರಮಕೆ ನಡೆತಂದು
ನಿಂದು ನುಡಿದಂ ವಿಶ್ವಕರ್ಮಂಗೆ ನೀನೊಂದು
ಯಾಗಮಂಟಪವನೆತ್ತೆಂದು ಪೇಳ್ವನಿತಕ್ಕೆ
ಬೇಗದಿಂ ನೆರೆದುದಾಗಳೆ ಭೂಮಿಯಗಲಕ್ಕೆ ೧೫೦
ಭೂಮಿಗೆ ವಿಚಿತ್ರಮಾದುದು ಮಂಟಪಂ ನೋಡೆ
ಹೋಮಕುಂಡಂ ಸುಡುವ ಮುಳ್ಳೆಳ್ಳುಗಳ್ಗೂಡೆ
ನಡುವೆ ಯೂಪದಕಂಭವಿಂಬಿನಿಂ ಮೆಱಿವುತಿರೆ
ಕೊಡದಿಂದೆ ತಮತಮಗೆ ನವಘೃತಮನಡಕುತಿರೆ
ಕರೆಸಿದಂ ಪೆಣ್ಮಕ್ಕಳಳಿಯಂದಿರಂ ಕೂಡೆ
ಬರಿಸಿದಂ ಹರಿಯಜಪುರಂಧರರುಮುಂ ನಾಡೆ
ಧಿಗಧೀಶರುಂ ತ್ರಿದಶರುಂ ದಿವ್ಯ ಮುನಿಗಳುಂ
ಜಗದೊಳುಳ್ಳರಸುಮಕ್ಕಳನೆಸೆವ ಮನುಗಳುಂ
ದ್ವಿಜಮುರ್ಖ್ಯರುಂ ಕರಸಿ ನಿಜವರ್ಗಮುಂ ತರಿಸಿ
ದ್ವಿಜರಾಜನುಂ ರವಿಯುಮುಂ ವಸುಗಳುಂ ಬರಿಸಿ ೧೬೦

ಪುರಹರುಂ ಗಿರಿಜೆ ಗಣನಾಯಕರ್ಪೊಱಗಾಗೆ
ನೆರೆಪಿದಂ ಪಾತಕಜನವನವನಿ ಬೆಱಗಾಗೆ
ಆರರೆ ಮುಖಮುಂ ತಣೆಪ ಕಾಲಂಗೆ ತುತ್ತಾಗೆ *
ಪೊಱಗೆ ಕಾಪಿಟ್ಟು ಶಕ್ರಾದಿ ದಿಕ್ಪಾಲರಂ
ನೆಱಿ ಪೇಳುತುಂ ಬರಲ್ ಸಕಳ ಭೂಪಾಲರಂ
ಬಂದು ದಕ್ಷಬ್ರಹ್ಮ ಸಭೆಗೆ ಕೈಮುಗಿದೆನಗೆ
ಒಂದು ಯಾಗವನೊಡರ್ಚುವುದಕ್ಕೆ ನೀವೆನಗೆ

* ಈ ಚರಣವು ಹೆಚ್ಚಿಗೆ ದೊರೆತಿದೆ

ಕರುಣಿಪುದನುಜ್ಞೆಯಂ ಕುಡುವುದೆಂದೆನುತಿರಲು
ವರಮುನಿ ದಧೀಚಿ ನುಡಿದಂ ಸಭೆ ಭಯಂಗೊಳಲು
ಉಸಿರಿಲ್ಲದೊಡಲಂತೆ ರವಿಪುಗದ ನಭದಂತೆ
ಶಶಿಯಿಲ್ಲದಿರುಳಂತೆ ಹವಿಪುಗದ ಮಖದಂತೆ
ಹರನಿಲ್ಲದೊಪ್ಪುದೀ ಯಾಗವನುರಾಗದಿಂ
ಕರೆದು ಬಿಜಯಂಗೆಯ್ಸಿ ತರ್ಪುದತಿ ವೇಗದಿಂ

ಎನೆ ದಕ್ಷನುರಿಯೊಳಗೆ ತುಪ್ಪಮಂ ಹೊಯ್ದಂತೆ
ಮುನಿದು ಭುಗಿಲೆನುತೆ ನುಡಿದಂ ವರಸಭೆಯ ಮುಂತೆ
ಎನೆ ದಕ್ಷನುರಿಯೊಳಗೆ ತುಪ್ಪವಂ ಹೊಯ್ದಂತೆ
ಮುನಿದು ಭುಗಿಲೆನುತೆ ನುಡಿದಂ ಮುನಿಯು ನಿಂದಂತೆ
ಹರನೀ ಸಭೆಯ ನಡುವೆ ಕುಳ್ಳಿರಲು ಯೋಗ್ಯನೇ
ಗೊರವನಂ ಪೆಸಗೊರ್ಗಂಬಡನಿತಕ್ಕೆ ಭಾಗ್ಯನೇ
ಸುರರಸ್ತಿಮಾಲೆಯಂ ಕೊರಲೊಳಿಳಿಪಿಪ್ಪನಂ
ಕರೆವರೆ ಛೀ ಪುಲಿದೊವಲನುಟ್ಟಿರ್ಪನಂ
ಮಱೆದು ಮಗಳಂ ಕೊಟ್ಟೊಡನಿತಕ್ಕೆ ನಿರ್ಮಾತ್ರ-
ನುಱುವನಪ್ಪನೆ ಸಿತಗನಿನ್ನೆಮಗೆ ಬೇಡಾತ
ಉಡುಗೊಱೆ ದಧೀಚಿ ನಿನಗೀವೊಂದು ಮಾತೆಂದು
ನುಡಿಯಲ್ದಧೀಚಿಗಂಕುರಿಸಿತ್ತು ಕಿವಿಸಂದು
ನಿಟ್ಟೊರಸಿ ಕಳೆಯಲ್ಬಗೆದನವನ ಜನ್ಮಮಂ
ನಟ್ಟು ಹರಗಲ್ಬಗೆದನವನ ಕುಲವೆಲ್ಲಮಂ
ನೋಡಿದನನಾಗತ ಜ್ಞಾನದಿಂದಂ ನಿಂದು
ಮಾಡುವವನೊಬ್ಬನುಂಟೆಂದು ಸೈರಿಸಿ ನೊಂದು

ಕೇಳೆಲೆವೊ ದಕ್ಷ ನೀನಂಜದೆನ್ನಯ ಮುಂದೆ
ಭಾಳಾಕ್ಷನಂ ದೇವನಂ ಸ್ವಾಮಿಯಂ ನಿಂದೆ
ನುಡಿಯುದಕ್ಕೇನವಕ್ಕೇನದಕ್ಕೆಲವೊ ಕುಳ್ಳಿರ್ದ್ದ
ತುಡುಗುಣಿಗಳಂ ದಿಟಂ ಗಡ ದೈವಗಳೆಂದಿರ್ದ್ದ

ಕುನ್ನಿಗಳ ನೆಚ್ಚಿ ನೀ ಜನ್ನಮಂ ತೊಡಗಿದಾ
ಇನ್ನೇನು ಹಸನಾಯ್ತು ಹರಣಮಂ ನೀಗಿದಾ
ಇವನ ನುಡಿಯಂ ಕೇಳ್ದು ಮಱುಮಾತು ಕುಡದವರ್ಗೆ
ಶಿವಭಕ್ತಿಯಾಗದೆ ಹೋಗಲಿಂತೀ ದ್ವಿಜರ್ಗೆ
ಈ ಪಾತಕನ ಯಜ್ಞ ಕಡೆಮುಟ್ಟದಿರ್ಕೆಂದು
ಶಾಪಮಂ ಕೊಡುತೇಳ್ದಯಿಲ್ಲಿ ನಿಮಗೇನೆಂದು
ಆಗಳಾಮುನಿವರ ದಧೀಚಿಯೊಡನೆಳ್ದವರು
ರಾಗದಿಂದಿರ್ದ್ವರುಂ ಶಾಪವರ್ಜಿತರವರು
ಉಪಮನ್ಯು ದುರ್ವಾಸಗಸ್ತ್ಯ ಗೌತಮರೆಂದು
ಕುಪಿತದಿಂದಂ ಬರೆ ವಶಿಷ್ಠನುಂ ಭೃಗುವಂದು
ನಡೆದಂ ದಧೀಚಿಮುನಿ ತನ್ನಾಶ್ರಮಕ್ಕೆಂದು
ಮೃಡನರಸಿಗರುಪಲಿತ್ತಂ ನಾರದಂ ಬಂದು
ತಂದೆ ಮಾಡುವ ಯಾಗಮಂ ನೋಡಲೆಂದಗಜೆ
ಇಂದುಮೌಳಿಗೆ ಬಿನ್ನಪಂ ಮಾಡಲಾ ಗಿರಿಜೆ
ಬೇಡವಂ ಬಗೆವನಲ್ಲೆಲೆ ಗೌರಿ ಹೋಗದಿರು
ನಾಡೆ ಮೂರ್ಖಂ ಜಱಿವನೆಲೆ ಭಕ್ತೆ ಹೋಗದಿರು
ಬೇಡೆಂದು ಬೆಸಸುತಿರೆ ಕೇಳದೆ ಮಹಾದೇವಿ
ಕೂಡೆ ಕರೆಸಿದಳಮೃತಕರಮುಖಿಯರಂ ದೇವಿ
ಕರೆಯಿಸಲ್ ಬಂದರ್ವಿದಗ್ಧೆಯರ್ಮುಗ್ಧೆಯರ್
ಹರನರಸಿಯೊಡನೆಯ್ದೆ ಬಂದರತಿ ನೀಱೆಯರ್
ನಲಿದು ಬಂದರ್ವೊಲಿದು ಕನ್ನೆಯರ್ ಚೆನ್ನೆಯರ್
ನಲೆ ಹರುಷದಿಂದೊಲಿದು ಬಂದರತಿ ಚಲುವೆಯರ್
ಕಳಹಂಸಯಾನದಿಂ ನಡೆದು ಬಂದರ್ಸತಿಯ–
ರಳಿಕುಂತಳೆಯರಲ್ಲಿ ರತಿಯ ರೂಪಾನ್ವಿತೆಯ–
ರ್ಪ್ರತಿರಹಿತನರಸಿಯೊಡನೆಯ್ತಂದರೊಪ್ಪದಿಂ
ಅತಿಶಯದೆ ಮಿಗೆ ಸಿಂಗರಂ ಮಾಡಿ ಬೇಗದಿಂ
ಅಸಮಾಕ್ಷನರಸಿ ಬಂದಳ್ಬೇಗ ಹರುಷದಿಂ

ಒಸೆದು ಬಿಜಯಂಗೆಯ್ವುದೆನೆ ದೇವಿ ರಾಗದಿಂ
ನಂದೀಕೇಶ್ವರನ ಬೆನ್ನಲಿ ಸುಖಾಸನವಿತ್ತು
ಇಂದುಮುಖಿ ಕೆಲಬಲದ ಸತಿಯರ್ಗೆ ಮೊಗವಿತ್ತು
ನಡೆವಾಗಳಬಲೆಯರುಘೇ ಚಾಂಗು ಬೊಲ್ಲೆಂದು
ನಡುವೆ ಸಂದಣಿ ರಂಭೆ ಹೆಜ್ಜೆಸಾರ್ದು ಬಾರೆಂದು
ಕೆಲಬಲದೆ ನಡಯಿ ಶಚಿ ಉರ್ವಸಿಯರೆಂದೆಂಬ
ಎಲೆಲೆ ಖೇಚರಿಯೆಂದು ದೇವಿಯುವಧಾರೆಂಬ
ಚಮರಮಂ ಸೈತಿಕ್ಕು ಲಕ್ಷ್ಮಿ ಸೈತಿರುಯೆಂಬ
ಅಮರ್ದ್ದ ಸತಿಯಂ ನೋಡಿ ಸೀಗುರಿಯನಿಕ್ಕೆಂಬ
ಸಸಿನೆತ್ತು ಬೆಳುಗೊಡೆಗಳಂ ಚಂದ್ರವಧುವೆಂಬ
ಒಸೆದು ಬರುತಿರ್ಪ್ಪ ಕಿನ್ನರಿಯರಂ ಪಾಡೆಂಬ
ಕಳಕಳ ವಿನೋದಂಗಳೊಪ್ಪೆ ಸತಿಯರ ನಡುವೆ
ಸುಳಿವ ಗಂಧರ್ವ ಲಲನಾಕೋಟಿಗಳ ನಡುವೆ
**ನಡೆತಂದಳಿಂದುವಿನ ಬೀಡು ಪೊರಮುಟ್ಟಂತೆ**
**ನಡೆತಂದಳೆಳವಳ್ಳಿ ಬನವೊಲಿದು ಬರ್ಪ್ಪಂತೆ**
ಸಕಳ ದೇವತೆಯರಧಿದೇವಿ ಬರುತಿರ್ದ್ದ–
ಅಕಳಂಕ ಚಂದ್ರಧರನರ್ಧಾಂಗಿ ಬರುತಿರ್ದ್ದ–
ಇಂತು ಬರೆವರೆ ಕಾಣಲಾಯ್ತು ದಕ್ಷನ ನಾಡು
ಮುಂತೆ ಬರೆವರೆ ಮುಂದೆ ನಿಂದುದಾತನ ಬೀಡು
ಬಂದು ಪಟ್ಟಣವಂ ವಿಳಾಸದಿಂ ಪುಗುತಿರಲ್
ಮುಂದೆ ಇದಿರ್ಗೊಂಬರಿಲ್ಲಾ ನಡೆಯಿದೇಕೆನಲ್
ಒಡನೆಯ್ದಿ ಬರ್ಪ್ಪ ಸಂಗಡದ ಸತಿಯರ್ವೆರಸಿ
ನಡೆತಂದು ನಂದಿಯಿಂದಿಳಿದು ಪುರಹರನರಸಿ
ರಾಹುವಿನ ಮುಂದೆ ಶಶಿಕಳೆ ಬಂದು ನಿಂದಂತೆ
ಲೋಹಿತಾಶ್ವನ ಮುಂದೆ ದಾರುವನ ನಿಂದಂತೆ
ತಂದೆ ದಕ್ಷನ ಮುಂದೆ ರುದ್ರಾಣಿ ನಿಲುತಿರಲ್
ಮುಂದುಗಾಣದ ಕೋಪಿ ನೋಡದೆ ತಿರುಗುತಿರಲ್

ಎತ್ತತ್ತ ದೇವಿ ಬರಲತತ್ತ ತಿರುಗುತಿರೆ
ಸುತ್ತಿಬರೆ ದಕ್ಷನತಿ ವಿಮುಖನಾಗುತ್ತುಮಿರೆ
ಮಗಳೆಂಬ ಸಲುಗೆಯಿಂದಂ ಮುಂದೆ ನಿಲುತಮಿರೆ
ಬಗೆಯುದಗಜೆಯುನವಂ ಬಯ್ಯೆ ಸಭೆ ಕೇಳುತಿರೆ
ಹೇಳಬಾರದು ನರಕಿ ನುಡಿದ ಸುಡು ನುಡಿಗಳಂ
ಭಾಳಾಕ್ಷನಂ ನಿಂದಿಸಿದನೊಲಿದ ಪರಿಗಳಂ

ತನ್ನನೇನೆಂದೊಡಂ ತಾನದಕೆ ಸೈರಿಸಿದ-
ಳಿನ್ನದೆಂ ಶಿವನನೆಂದೊಡೆ ದೇವಿ ಕೋಪಿಸಿದ-
ಳೊಳಗೊಳಗಳಲ್ದಳ್ಬಳಲ್ದಳ್ಮಹಾದೇವಿ
ಎಳಲತೆಯ ನುರಿಹತ್ತಿದಂತಳಾದೇವಿ*
ಹಳವಳಿಸಿ ಕಣ್ಗೆಟ್ಟು ಕೊರಗುತಿರ್ಪ್ಪಳ್ದೇವಿ
ಸುಯ್ಯೊಡನೆ ಕಿಡಿ ಪೊಱಮಡುತ್ತುಮಿರೆ ಸುಯ್ವುತುಂ
ಕೆಯ್ಯಂ ಮೊಗದೊಳಗಿಟ್ಟು ಮಿಗೆ ತಡೆದು ಸುಯ್ವುತುಂ
ಮೆಲ್ಲನೆಚ್ಚತ್ತು ಚಿಂತಿಸಿ ಕುಪಿತೆ ನೋಡಿದಳ್
ಸಲ್ಲಲಿತೆ ತನ್ನ ಮನದೊಳಗೆ ಮಾತಾಡಿದಳ್
ಸೈರಿಪೆನೆ ಹರಣದೊಡೆಯನ ನಿಂದೆಗೇಳ್ದೆನೇ
ಧಾರುಣಿಗೆ ಅಪಕೀರ್ತಿ ಪಿತೃವಧೆಗೆ ಸಿಲ್ಕಿದೆನೆ
ಹರನಿಂದೆಗೈದನಂ ಕೊಲ್ವುದಲ್ಲಾ ಸಾವು-
ದರವರಿಸಲಾಗದಿಂದನುಮಾನವಿನ್ನೇವು-
ದೆನುತಿರಲ್ಕೋಪ ಉಬ್ಬರಿಸಿ ತನ್ನಂ ಮೀಱಿ
ವನಿತೆ ಕಣ್ಣಂ ಮುಚ್ಚಿ ನೆನೆದು ಶಿವನಂ ನೀಱಿ

ಒಳಗಣಾತ್ಮಜ್ಯೋತಿಯಿಂದೆ ತನುವಂ ಮುಸುಕೆ
ಬೆಳಗಾದಳಾ ಸಭೆಯ ಕಣ್ಗೆ ತಮಂ ಮುಸುಕೆ
ಆಗಳಾ ಸಭೆ ಮಱುಗಿ ಕೌತುಕಂ ಬಡುತುಮಿರೆ
ಮೇಗಱಿವವರ್ಕೆಲಪೊರ್ಲ್ಲಮೆಂದೆನುತುಮಿರೆ
ಪೂಗಿಡುವಿನಲ್ಲಿ ಬೇಗೆಯನಿಕ್ಕಿದಂತಾಯ್ತು
ಪೂಗಣೆಯನಡಸಿ ದಳ್ಳುರಿ ಮುಸುಕಿದಂತಾಯ್ತು

ಮಲ್ಲಿಗೆಯ ಬಿರಿಮುಗುಳ ಚಲ್ಲಬಡಿದಂತಾಗೆ
ಅಲ್ಲಲ್ಲಿ ಪರಿಜನಂ ಬಿಸುಸುಯ್ದು ಬೆಱಗಾಗೆ
ಒಡೆವಂದ ಕೆಳದಿಯರ್ಧರೆಯೊಳಸುವಂ ಹೊಸೆದು
ಮೃಡನರಸಿಯಂ ಕಾಣದಡಿಗಡಿಗೆ ಬಸವಳಿದು
ಬಳಿಸಂದವರ್ಕೆಲರ್ಬಳಲುತಿರ್ಪ್ಪರ್ಕೆಲರ್
ಅಳಲುತಿರ್ಪ್ಪರ್ಕೆಲರ್ ಕೊರಗುತಿರ್ಪ್ಪರ್ಕೆಲರ್
ಕೆಲರೇನುವಱಿಯದಂತಲ್ಲಿ ಬರೆದಂತೆ ನಿಲೆ
ಕೆಲರೊಲಿದು ಪರಿಗಳಿಂದೊದಱಿ ಕಳವಳಿಸಿ ನಿಲೆ
ತನತನಗೆ ಜೀವಿಸುವ ಪರಿಯೇನುತಂತಂದು
ನನೆನೆನೆದಳಲ್ದು ಬಿಸುಸುಯ್ಯುತಿರಲವರಂದು

ಇತ್ತಲಂಬಿಕೆ ತನ್ನ ಕೋಪದೊಳ್ಪಾನೆ ಸಲೆ
ಅತ್ತಲಂಭವಂ ಮನಂ ಮಱುಗಿ ಮುಗುಡದೊಳು ನಿಲೆ
ಆ ಸಭೆ ಸಭಾಕಂಪನದೊಳು ಮರುಗುತ್ತಿರಲು
ಈಶ ಉಮ್ಮಳಿಸಿ ದುಮ್ಮಾನದಿಂದಿರುತಿರಲು
ನಂದೀಶನಂ ಕರೆದಿದೇನು ಸೋಜಿಗವಯ್ಯ
ಇಂದುಮುಖಿ ಬೇಡೆನಲು ಹೋದ ಫಲದಿಂದಯ್ಯ
ಸೊಗಸದೀ ಕಿನ್ನರರ ಗೀತವಿಂದೇಕಯ್ಯ
ಬಗೆವುಗವು ನೀವಿಲ್ಲಿ ನುಡಿವ ಮಾತುಗಳಯ್ಯ
ಅನಿಮಿತ್ತವಿಂತಿದೇಕಾಗುತಿರ್ದ್ದಪ್ಪುದಯ್ಯ
ವನಿತೆ ಬೇಡೆನೆ ಹೋದಳೇನಪ್ಪುದಂತಯ್ಯ

ಎನುತಿರಲ್ ನಂದಿಕೇಶ್ವರನಲ್ಲಿ ಬರುತಿರ್ದ್ದ-
ನನುಮಿಸುತೆ ಮುನ್ನಿನಂತಲ್ಲದೈತರುತಿರ್ದ
ನೆಳಲ್ವ ಕಿವಿ ಒಱಿಮೊಗಂ ಬಳಲ್ವ ತನು ದುಮ್ಮಾನ
ವಳಲ್ವ ಮನದುತ್ಸವಂ ಕಳಲ್ವಂಗದಿಂ ಧ್ಯಾನ
ವೀಶನಂ ಮುಟ್ಟಿ ನೆನಹವೆ ಜೀವವಾಗಿ ಬರೆ
ಭಾಸುರ ವಿಳಾಸವಲ್ಲವನೊಕ್ಕು ತಾನೆ ಬರೆ

ದೇವಿಯಿಲ್ಲಾರುಮಿಲ್ಲಯ್ಯಯಿದೇನೆಂದೆನಲ್
ದೇವ ಬಿನ್ನಪವೆಂದೊಡಭವನಾಲಿಸುತಿರಲ್
ತಂದೆಯೆಂದಗಜೆ ದಕ್ಷನ ಮುಂದೆ ಪೋಗಿ ನಿಲೆ
ನಿಂದಿಸಿದನೀಶ ನಿಮ್ಮಂ ದಕ್ಷನದನಬಲೆ

ಕೇಳಲಾಱದೆ ತನಗೆ ತಾನೆ ಶಪಿಸಿದಳೆಂಬ
ಭಾಳಲೋಚನ ನಿಮ್ಮ ನಿಜಕೆ ಸಂದಳುಮೆಂಬ
ನುಡಿಯೊಡನೆ ಮಸಗಿ ಘುಡುಘುಡಿಸುತಿರ್ದುದು ಕೋಪ-
ವೆಡೆಗೊಂಡುದಿಂದುಧರನೊಳಗೆಲ್ಲವನುತಾಪ-
ವಾಗಳಾ ನಂದೀಶನಂ ಪತ್ತಿದುದು ಮೌನ-
ವಾಗಳು ಗಣಂಗಳಂ ಮುತ್ತಿತ್ತು ದುಮ್ಮಾನ-
ವಲ್ಲಿ ಭಿತ್ತಿಯ ಚಿತ್ರ ಕಳೆಗುಂದಿ ತಾನಿರ್ದು-
ವಲ್ಲಿ ಪುತ್ಥಳಿಗಳೆಲ್ಲಂ ಸೊಂಪುಗೆಟ್ಟಿರ್ದು-
ವಲ್ಲಿಯೋದುವ ಶುಕಾವಳಿ ಮೂಗುವಟ್ಟಿರ್ದು-
ವಲ್ಲಿ ಸಲಹಿದ ಹಂಸಮಾಲೆ ನಡೆಗೆಟ್ಟಿರ್ದು-
ವಲ್ಲಿ ಬೆಳೆಸಿದ ಲತಾವಳಿಗಳುಂ ಕೊರಗುತಿರೆ
ವಲ್ಲಿಯೊದವಿದ ಬನಂ ಜವ್ವನಂಗೆಡುತಮಿರೆ
ಭೋಗಂಗಳೊಂದೆಸೆಗೆ ಭಾಗಂಗಳೊಂದೆಸೆಗೆ
ರಾಗಂಗಳೊಂದೆಸೆಗೆ ಯಾಗಮುವದೊಂದೆಸೆಗೆ
ಸಂಪದಗಳೊಂದೆಸೆಗೆ ಭೂವನಿತೆಯೊಂದೆಸೆಗೆ
ಸೊಂಪುಗಳದೊಂದೆಸೆಗೆ ಲಾವಣ್ಯವೊಂದೆಸೆಗೆ

ತಮುತಮಗೆ ಸುಯ್ಯುತಂ ಮರುಗಿ ಮೊಱೆಯಿಡುತಮಿಱೆ
ಶಿವನಂತರಂಗದಿಂ ಕೋಪವಡರುತ್ತಮಿಱೆ
ನಂದೀಶನಱಿದು ಭಯದಿಂದೆ ಹಿಮ್ಮೆಟ್ಟುತ್ತಿರೆ
ನಿಂದ ಗಣಸಂಕುಳಂ ಹೆಱೆಸಾರ್ದು ನಡುಗುತಿರೆ
ಕುಪಿತನಾದಂ ದೇವನಿನ್ನಾರು ಜೀವಿಪರು
ವಿಪರೀತವೇನಪ್ಪುದಿದನಾರು ಭಾವಿಪರು

ಮುಳಿದಡೆ ಮಹಾಪ್ರಳಯ ಉಳಿವರಾರೂ ಯಿಲ್ಲ
ತಿಳಿವಡರಿದುಗ್ರನಿದ್ದಿರವ ತಾನೇ ಬಲ್ಲ-
ನೆನುತೆಲ್ಲರಂಜಿ ಕಣ್ಮುಚ್ಚೆ ಪರಮೇಶ್ವರಂ
ನೆನೆಯಲರಿದೆನಿಪ ರೂಪಿನೊಳಿರ್ದನೀಶ್ವರಂ

ಇರೆ ದೇಹದೊಳ್ ಸುತ್ತಿಹೊತ್ತಿಹೊಗೆದುದು ಕೋಪ
ಉರವಣಿಸಿತೊಡಲೊಳಗೆ ಕುಂಭಿಕ್ಕಿತನುತಾಪ-
ವಡಸಿ ನೆಗೆದುದು ಭಾಳಲೋಚನದ ಕೆಲದಿಂದೆ
ಘುಡುಘುಡಿಸಿ ಮಸುಗಿದುದು ಬೆಮರ ನೆವದಿಂದೆ
ಕೋಪವೆಲ್ಲಂ ನೆರೆದುಬಂದೊಂದೆಡೆಗೆ ಬಂದು
ರೂಪಾಗಲನುಗೆಯ್ಯಲದಱ ಮಧ್ಯದೊಳೊಂದು
ನೋಡಬಾರದ ಥಳಥಳಿಪ್ಪ ತೇಜೋಮೂರ್ತಿ
ಕೂಡೆ ಪುಟ್ಟುತ್ತಿರ್ದನಭವನಧಟಿನ ಮೂರ್ತಿ

ಭುಗಿಭುಗಿಲ್ ಭಿಟಿಭಿಟಿಲ್ ಬುರ್ಭುಗಿಲ್ ಭುಗಿಲೆಂಬ
ಭುಗಿಭಿಟಿಲ್ ಭುಗಿಭಿಟಲ್ ಭುಗಿಲೆಂಬ
ಧಗಧಗಧಿಗಿಲ್ಧಿಗಿಲ್ಧಂಧಿಗಿಲು ದಂಧಿಗಿಲು
ಧಗಿಲೆಂಬ ಧನಿಗೆ ಧರಣೀತಳಂ ಬಿರಿವುತಿರೆ
ಭುಗಿಲೆಂಬ ರಭಸಕಂಬರತಳಂ ಸಡೆವುತಿರೆ
ಹರಿಬೊಮ್ಮರೆದೆ ಬಿಱಿಯೆ ಕುಲನಗಂಗಳ್ಕುಸಿಯೆ
ಪರಸಮಯಿಗಳ್ ಜಱಿಯೆ ಜಳಧಿ ಕುಕ್ಕುಳ್ಕುದಿಯೆ
ರವಿರಥಂ ದೆಸೆಗೆಡಲ್ ಗಣಪತಿಗುಹರ್ಬೆದಱೆ
ಭುವನಂ ಕಿವುಡುವಡಲ್ ಗಣಸಮಿತಿಗಳ್ಕೆದಱೆ
ಗಗನದೋಳ್ಬಱ ಸಿಡಿಲ್ಮೂರ್ತಿಗೊಂಡೊಗೆವಂತೆ

ಕಾಳಕೂಟದ ನಗದೊಳೊಗೆದ ಕೇಸರಿಯಂತೆ
ಕಾಲಾಗ್ನಿಯಿಂದೆ ದಳ್ಳುರಿ ಭುಗಿಲನೊಗೆವಂತೆ
ಬೆಳಗು ಮೂಱುಲೋಕದೊಳ್ತೊಳತೊಳಗೆ ಕಡುಪಿಂದೆ
ಘುಳಿಲನೊಗೆದಂ ವೀರಭದ್ರಂ ನಿಟಿಲದಿಂದೆ

ಏಕಜಡೆಲಿಂಗಂ ಶಿರೋಮಾಲೆಗಳ್ಗೊಳಗೆ
ಭೀಕರವೆನಿಪ್ಪ ಕೆಂಗಣ್ಣು ಮೀಸೆಗಳ್ಬೆಳಗೆ
ಕುಂಡಲಂ ಕೋಱೆದಾಡೆಗಳೊಪ್ಪಿ ತೋರುತಿರೆ
ಚಂಡಾಂಶು ವೀರಪದಕಂ ತೊಡರು ಮೆಱೆವುತಿರೆ

ನಿಂದ ನೀಲದಗಿರಿಗೆ ಕೈಕಾಲ್ಗಳೊಗೆದಂತೆ
ಮುಂಧರಂ ಮಸಗಿ ಕೋಪದಿ ರೂಪಗೊಂಡಂತೆ ೩೫೦
ನೋಡಿರೆ ಭಾಳನಯನಂ ಹೆತ್ತ ಶಿಶುವಿಂಗೆ
ಮಾಡಿದರ್ಜಾತಕರ್ಮವನಾಗಳಾತಂಗೆ
**ನಾಮಕರಣಂ ವೀರಭದ್ರನೆಂಬುದು ತೆನಗೆ**
ನೇಮಿಸಲು ಬಾಯ್ವಣ್ಣೆ ಬೊಮ್ಮಾಂಡವದು ತನಗೆ
ತೊಟ್ಟಿಲುಂ ತುಂಬಿದಾಕಾಶವಾದುದು ನೋಡ
ಕಟ್ಟಿದ ಗುಣಾವಳಿ ಪ್ರತಾಪ ತಲೆಗಳ್ನೋಡ
ತೂಗುವ ಪ್ರಳಯ ಕೋಳಾಹಳ ಗಣಾಧಿಪರ್
ಜೋಗುಳಂ ಪಾಡುವರ್ಬೀರಸಿರಿಮಾರಿಯರ್
ಬಾಲದೊಡಿಗೆಗಳೊಪ್ಪೆ ಬೊಬ್ಬಿಡುವ ಶಿರಮಾಲೆ
ಬಾಲತನದಾಟವಾ ಮುಖವನುರುಪುವ ಲೀಲೆ ೩೬೦

ಎಂದೊಡನೆಂತು ಬಣ್ಣಿಪೆನವನ ವೀರಮಂ
ಇಂದುವೌಳಿಯ ಸಕಳ ಸಾಮರ್ಥ್ಯಸಾರಮಂ
ನೋಡ ನೋಡಲ್ ಬೆಳೆದೆನೆಲೆಲೆ ಆಕಾಶಮಂ ಮೀಱ
ನೋಡ ನೋಡಲ್ ಬೆಳದಂ ಬ್ರಹ್ಮಾಂಡಮಂ ಮೀಱ
ಒಮ್ಮೆ ನೋಡಿದಡೆ ಮತ್ತಾ ಪರಿಗಳಂ ಕಳೆದ
ಒಮ್ಮೊಗೊಮ್ಮೆಗೆ ಶಂಭು ತಲೆದೂಗುತಿರೆ ಬಳೆದ-
ನುಳ್ಳ ಕೋಪಂ ವೀರಭದ್ರನೊಳೆ ನೆಲೆಗೊಂಡು
ಒಳ್ಳಿತುಳಿದುದು ಶಾಂತಿ ಶಂಕರನ ನೆಡೆಗೊಂಡು
ತನಗೆ ಸಿಸು ದಕ್ಷಯಾಗಕ್ಕೆ ಪುಟ್ಟಿತು ಮಾರಿ
ತನಗೆ ಚಿಣ್ಣಂ ಕಾಲನೆಂಬವಂಗುರಿಮಾರಿ

ಇತ್ತೆಸೆವ ತೀವ್ರದ ಮಹಾವೀರನಂ ಕಂಡು
ಚಿಂತಿಸಿದನೀಶ್ವರಂ ತನ್ನೊಳಗೆ ಭಯಗೊಂಡು
ಏಕೆ ಕೋಪಿಸಿದೆ ಇವನೇಕೆ ಹುಟ್ಟಿದನೆಂದು
ಲೋಕೇಶ್ವರಂ ನಾಡೆ ಕೌತುಕವ ತಾಳ್ದಂದು

ತಲೆದೂಗಿ ಹರ ವೀರಭದ್ರನ ಮೊಗಂ ನೋಡಿ
ನಲಿದು ಮನದೊಳಗೆ ತೂಪಿಱಿದನೊಲವಿಂ ಕೂಡಿ
ಕರೆದು ಬೆಸಸಿದನಭವನಾ ವೀರಭದ್ರಂಗೆ
ಪರಸಮಯಸಂತಾನತಿಮಿರದಿವಸೇಂದ್ರಂಗೆ
ಕುಱಿದಕ್ಷನಂ ಪಿಡಿದು ಜನ್ನಮಂ ಸುಟ್ಟುರುಹು
ತಱಿದಿಕ್ಕು ಮಾಱಾಂತರಂ ಕಾಲನೊಳ್ನೆರಹು
ಎಂದು ಬೆಸಸಲ್ ಭದ್ರಕಾಳಿಯೊಡನೈತರಲ್
ಅಂದು ಕೋಟಾಕೋಟಿ ರೋಮಜರ್ನಡೆತರಲ್
ಉರದ ಬಾಯವರಲ್ಲಿ ಕರದ ಕಣ್ಣವರಲ್ಲಿ
ಶಿರದ ಕಾಲವರಲ್ಲಿ ಚರಣಮುಖದವರೆಲ್ಲಿ
ಬೆನ್ನಬಾಯರ್ಕೆಲರ್ ಕುಡಿದಾಡೆಯರ್ಕೆಲರ್
ಕೆನ್ನೆಯುಗುರರ್ಕೆಲರ್ ಕೆಡು ನಿಡಿಯುವರ್ಕೆಲರ್
ಗಗನದೊಳ್ನಡೆಯುತುಂ ಕಡಲಂ ಕಲಂಕುತುಂ
ದಿಗಿಭಮಂ ಕೆಡಪುತುಂ ಪೊಡವಿಯಂ ಹಿಳಿಯುತುಂ
ರವಿರಥವನೆಡಪುತುಂ ರಾತ್ರಿಪರನರೆವುತುಂ
ಪವನಮಂ ಪಿಡಿಯುತುಂ ಭಗಣಮನೊಡರ್ಚುತುಂ

ಪೊಱಮಟ್ಟುದಮ್ಮಮ್ಮ ಭೂಮಿ ಬೆಸಲಾದಂತೆ
ಪೂರಮಟ್ಟುದುಗ್ರಗಣತತಿ ಗಗನಹೂತಂತೆ
ದುಂದುಭಿಗಳಲ್ಲಿಲ್ಲಿ ಬೆಳ್ಗೊಡೆಗಳೆತ್ತಿ ಬರೆ
ಸಂದಣಿಸಿ ಕೈದುಗಳುಬೆಳಗನುಗುಳುತ್ತಮಿರೆ
ಈಬಂದನೆಲೆಲೆ ಭಾಳೇಕ್ಷಣನ ಸುತನೆಂಬ
ಈಬಂದನಪ್ರತಿಮನುಗ್ರನತಿಬಳನೆಂಬ

ಹರವರಿ ಕಹಳಾರವಂ ದೆಸೆಗೆ ಪರಿವುತಿರೆ
ತಱುಗಿದನಲಧ್ವಜಂ ಗಗನದೊಳ್ಕುಣಿವುತಿರೆ
ಮಸಗಿ ಕಾಳಾನಲನ ಹೊಱಬೀಡು ಬಿಟ್ಟಂತೆ
ವಸುಧೆಗುಬ್ಬಸದ ಸಂಜಿನ ಬನಂ ನಡೆವಂತೆ

ಅಚ್ಚರಿಯ ವೀರಭದ್ರನ ಬೀಡು ನಡೆದು ಬರೆ
ಮಚ್ಚರಿಪ ದಕ್ಷಪುರವಲ್ಲಿ ನಸುದೋಱುತಿರೆ
ಕಂಡು ಕೈವೀಸಿದಂ ವೀರಭದ್ರಂ ಹಾದಿ-
ಗೊಂಡು ಹರಿದುದು ಬೊಬ್ಬಿಡುತೆ ಸಕಳ ಭೂತಾದಿ
ಗಣನಿಕರವೈದಿ ಉಲಿವುತ್ತೆ ಕೋಂಟೆಯ ಮುತ್ತೆ
ಸೆಣಸುಬಿಡದಾರ್ದ್ದುಮಲಕುರಿಯ ಹಳವಿಗೆ ಎತ್ತೆ
ಬೊಬ್ಬಿಡಲ್ ಯಾಗಮಂಟಪವದಿರ್ದು ಸಭೆ ಕೆದಱೆ
ಬೆಬ್ಬಳಿಸಿ ದಕ್ಷನಬ್ಬರವಿದೇನೆನುತೊದಱೆ
ಹೋಗಿಂದ್ರ ಹೋಗಗ್ನಿ ಹೋಗಿ ದಿಕ್ಪಾಲರಿರ
ಹೋಗಿ ಮುರಹರ ನೂಂಕಿ ನೆಡೆಯಿ ಭೂಪಾಲರಿರ

ಎಂದು ಚತುರಂಗ ಬಲಕಂ ಪೇಳ್ದನಾ ದಕ್ಷ-
ನಂದು ಘುಡುಘುಡಿಸಿ ಬರುತಿರ್ದ್ದಂ ಸರೋಜಾಕ್ಷ-
ನಾದಿಯಾಗಿರ್ದ್ದಮರರೊಂದೆಸೆಯೊಲೊಗ್ಗಿ
ವಾದಿನಿಂ ದಿಕ್ಪಾಲರೊಂದೆಸೆಯೊಳೊಡ್ಡಿರಲ್
ತೊಡಗಿತ್ತು ಚೂಣಿಗಾಳಗವಲ್ಲಿ ತನತನಗೆ
ನಡೆದು ನೂಂಕಿತ್ತು ಮೂದಲಿಸುತುಂ ತನತನಗೆ
ಬೆರಸಿ ಮೀಱಿತ್ತು ಶಿವದ್ರೋಹಿ ದಕ್ಷನ ಬಲಂ
ಹರಿಯಜದಿಶಾಧಿಪ ನೂಂಕಿತಾಗಳೆ ನೆಲಂ
ಕವಿದಿಕ್ಕಿದಂತಾಗ ವೀರಭದ್ರಂ ಬಂದು
ತವಿಸುವೆಂ ಇವರಸುಗಳಂ ಬಾಳಬಾಯ್ಗೆಂದು
ಬಱಸಿಡಿಲಬಳಗದಂತಿರ್ದ ಗಣತತಿ ಸಹಿತ
ಉಱುಬಿದಂ ಭೂಮಿತಳವದಿರ್ದು ಬಿರಿಯಲ್ಕಹಿತ

ಬಲವಳಿಯಲೆಯಿತೆಂದು ದಿಕ್ಕರಿಗಳಂ ಸೀಳ್ದು
ಬಳಸಿ ದುವ್ವಾಳಿಸುವ ತುರಗಂಗಳಂ ಪೋಳ್ದು
ನೆರೆದ ರಥನಿಚಯಮಂ ನುಚ್ಚುನೂಱಂ ಮಾಡಿ
ಪರಿತಹ ಪದಾತಿಗಳ ನರಿದು ಸಣ್ಣಂ ಮಾಡಿ

ಸಂಗರದೊಳಂದಮಮ ಹೊಕ್ಕೊಕ್ಕಲಿಕ್ಕುತಿರೆ
ಹೊಂಗೇಱಿ ನಾರಂದಮುನಿಯಲ್ಲಿ ಪೆರ್ಚುತಿರೆ
ರಣದೊಳಗ ಮಾರಿಗೆ ಯರೋಚಕಮದಾಗುತಿರೆ
ದಣಿಯುಂಡು ಕಾಲಂಗೆ ಕೊಕ್ಕರಿಕೆ ಪುಟ್ಟುತಿರೆ
ಇಂತಿಂತು ವೀರಭದ್ರಂ ತವಿಪುತಿರಲಂದು
ಮುಂತೆ ಹೊಯ್ಯೆಲ್ಗುಡುತ್ತಂತೊಬ್ಬ ಹರಿತಂದು

ಎಲೆ ದಕ್ಷ ನೀನೇಕೆ ಜನ್ನವೇಕೆಲೆ ಪಾಪಿ
ನಿಲಲಿರಿದು ಕೇಳೆಲವೊ ಮಂದುಗಾಣದ ಕೋಪಿ
ದೇವಿಯೂಳಿಗವಿಂದುಧರನ ಕಿವಿದಾಗಿತ್ತು
ಇಂದ್ರನೋಡಿದನಜಂ ಮೈಗರೆದನಂತಲ್ಲಿ
ನೊಂದು ಹರಿ ಹರಿಣನಾಗಿಯೆ ಬೀಳ್ದನಂತಲ್ಲಿ
ಹಿಡಿವಡೆದವರ್ಕೆಲರ್ ಪುತ್ತೇಱಿದರ್ಕೆಲರ್
ಮಡಿದರಧಟರ್ಕೆಲರ್ಬೆತ್ತಲಿದ್ದರ್ಕೆಲರ್
ಹುಲುಗಚ್ಚಿದರ್ಕೆಲರ್ಬಾಯ್ವರಲವರ್ಕೆಲರ್
ಪಲುಗಿರಿವವರ್ಕೆಲನೀರ್ಹೊಕ್ಕವರ್ಕೆಲರ್
ಬಂದುದಭವನ ದಾಳಿ ಕೊಂದುದಿದಿಲ್ಲೇಳಿ
ಬೆಂದು ಹೋದುದು ನಿನ್ನ ಯಾಗವೆನುತೇಳಿ.

ಎನುತಿರಲ್ಪುರದ ಬಾಗಿಲ್ವಾಡಮಂ ಸುಡುತೆ
ತನತನಗೆ ಕೇರಿಕೇರಿಯೊಳೆಯ್ದೆ ಕುಬ್ಬಿಡುತೆ
ನೆಱೆ ಬೀದಿವರಿವುತುಂ ಒದೆದೆತ್ತಿ ಕೆಡುಪುತುಂ
ಮುಱಿಹುಗಲ್ಕಾವುತುಂ ಮುಲೆತರಂ ಸೀಳುತುಂ
ಒದೆದೆತ್ತಿ ಕೆಡುವುತುಂ ಉದರಮಂ ಸೀಳುತುಂ

ಕಿತ್ತು ಬರಸೆಳೆವುತುಂ ತಲೆಚಂಡನಾಡುತುಂ
ನೆತ್ತರೊಗೆ ಸೂಸುತುಂ ಮಲೆದು ತಲೆಯೊತ್ತುತುಂ

ಉರಿವರಿವುತುಂ ಬಂದು ವೀರಭದ್ರಂ ಕಂಡು
ಹರುಷಮುಂ ಪುಟ್ಟಿಸುತೆ ಪಿರಿಯಗಣವೆಯ್ತಂದು
ಮುತ್ತಿದರ್ ಪಾತಕಂ ಸಮೆದ ಮಖಶಾಲೆಯುಂ
ಸುತ್ತಿದರದೇನೆಂಬೆನವರೊಂದು ಲೀಲೆಯುಂ
ಮಂಟಪವನೆತ್ತುವರ್ ದ್ವಿಜಸಭೆಯನೇಡಿಪರ್
ಕಂಟಣಿಸ ಪತ್ತುವರ್ ಗಜಬಜಂ ಮಾಡುವರ್
ಕಂಭಮಂ ತಱಿವುತುಂ ಕದಗಳಂ ಮುರಿವುತುಂ
ಇಂಬಿನಿಂ ಕುಣಿವುತುಂ ಮಿಗೆ ಪುಟಂ ನೆಗೆವುತುಂ
ಕೊಂಡದೊಳಗುಲಿವುತುಂ ನಿಂದಿಱುಗಿ ನೋಡುತುಂ
ಕೆಂಡವಂ ಕೆದಱುತುಂ ಮುಂದೆ ಬಂದಾಡುತುಂ
ತೊನೆದು ಕೈಪಱಿಗುಟ್ಟಿ ತೋಳೆತ್ತಿ ಪಾಡುತುಂ
ಮುನಿಗಳಂ ಹುಱಿಗುಟ್ಟಿ ಹೊತ್ತುಗಳ ನಟ್ಟುತುಂ
ಎಳ್ಳರಾಸಿಗಳನೆಲ್ಲರ ಮೇಲೆ ಚೆಲ್ಲುತ್ತುಂ
ಮುಳ್ಳೆಲ್ಲವಂ ಸುರರ ಮೋಱೆಗಳಮೇಲೆಳೆವುತುಂ
ಇಂತು ಮುಂಗುಡಿಯ ಭೂತಂ ಮಸಗುತಿರಲಂದು
ಪಿಂತಯಿದೆ ಕಲಿವೀರಭದ್ರಂ ಮುಳಿದು ಬಂದು
ಉರಿಯ ನಾಲಗೆಗಳಂ ಕಿತ್ತೆಳೆದು ಬಿಸುಡುತುಂ
ತಿರುಗಿ ಪೂಷನ ಪಲ್ಗಳುದುರೆ ಮುಳಿದೊದೆವುತುಂ
ವಾಣಿಯುಂ ಮೂಗರಿದು ಮಿಗೆ ಮುಂದುಗೆಡಿಸುತುಂ
ಮಾಣದಿದಿರಾಂತರಂ ಅಲ್ಲಿಯೇ ವೊರಸುತಂ

ಬರೆಕಂಡು ಸುರ ಸಮಿತಿ ಮಱುಗಿ ಮುಮ್ಮಳಿಗೊಂಡು
ನೆರೆದು ಗಗನದೊಳೆಲ್ಲರುಂ ವಿಸ್ಮಯಂಗೊಂಡು
ಏಕೆ ತೊಡಗಿದನವಂ ಯಾಗಮಂ ಮರುಳಾಗಿ
ಏಕೆ ಬಂದಳು ಗಿರಿಜೆ ದಕ್ಷಂಗೆ ಹಗೆಯಾಗಿ

ಬೆಟ್ಟೇಱಿ ಮೃತ್ಯುವಂ ಕರೆದುಕೊಂಡಂ ಪಾಪಿ
ಇಟ್ಟಿಣಿಸಿದುದು ತನಗೆ ಸಾವು ಕೆಟ್ಟಂ ಪಾಪಿ

ಮುನ್ನವೆ ದಧೀಚಿ ಮುನಿದು ಶಾಪಂಗಳಂಗೊಟ್ಟ-
ನಿನ್ನೇನೊ ಅಕಟಕಟ ಪಾಪಿ ದಕ್ಷಂ ಕೆಟ್ಟ-
ನೆನುತಮರರಲುತಲಿರೆ ಘುಳಿಘುಳಿಸುತಂ ಮುಸಗಿ
ಮುನಿದು ಬಂದುರವಣಿಸಿ ಸಿಡಿಲೆಱಗುವಂತೆರಗಿ

**ಕೆಡೆಕೆಡೆ ಶಿವದ್ರೋಹಿ** ಎನುತೆ ಶಿರವಂ ಹೊಯ್ದು
ಉಡುಗುಡುಗು ಗರ್ವ್ವವನೆನುತ್ತೆ ತಲೆಯುಂ ಕಡಿದು
ಒದೆದುತಂದಾ ತಲೆಯನುರಿವ ಕುಂಡದೊಳಿಕ್ಕಿ
ಇದೆಕೊಳ್ಳು ನೀನಾಹುತಿಯನಗ್ನಿ ಯೆನುತಿಕ್ಕಿ
ಸುಡಿವುತಂ ಹಿಡಿಹಿಡಿ ಸುರಾವಳಿಯನೆನುತುಮಿರೆ
ಮೃಡನಿತ್ತ ಬೆಸನಲ್ಲಿ ಮನಕೆ ತೋಱುತ್ತುಮಿರೆ
ನಡನಡುಗಿ ಕಟ್ಟಿರ್ದ ಕುಱಿಯ ತಲೆಯುಂ ತಂದು
ಒಡಲ ಮೇಲಿಟ್ಟು ಜೀವಂಗೊಟು ಕಲಿ ನಿಂದು
ದಕ್ಷನಂ ಹಿಡಿದು ಕೋಡಗಗಟ್ಟು ಕಟ್ಟುತುಂ
ತ್ರೀಕ್ಷಣನಣುಗಂ ಸುರರ ಮುನ್ನ ನೆರೆ ಕಟ್ಟುತುಂ
ತಿರುಗಿದಂ ಭೂತಗಣವಲ್ಲಲ್ಲಿ ಕುಣಿದಾಡೆ
ಹರಭಕ್ತರೆಲ್ಲರುಂ ಹರುಷದಿಂ ತೂಗಾಡೆ

ಬರುತಿರಲ್ಮುಂದೆ ತಾ ರಣರಂಗ ಭೂಮಿಯೊಳ್
ಮರುಳಪಡೆ ಎದ್ದುವೇನೆಂಬೆ ನೊಂದಣಕದೊಳ್
ಮೂಳೆಗಳ ತುಪ್ಪವಂ ತಲೆಯೋಡಿನೊಳು ಹೊಯ್ದು
ಕಾಳಿಜದ ಖಂಡಮಂ ಮೆಲ್ಲಿತಪ್ಪವನಾಯ್ದು
ಮಿದುಳ್ಗಳಂ ತೆಗೆತೆಗೆದು ರಾಶಿಗಳೊಂ ಸುರಿದು
ಮುದದಿಂದೆ ತಮತಮಗೆ ಮರುಳ್ಗಳೆಲ್ಲಂ ನೆರೆದು
ಜೊಟ್ಟಿಟ್ಟು ನೆತ್ತರೆಂ ಕರುಳಮಾಲೆಯನಿಕ್ಕಿ
ಆಟ್ಟೆಗಳನೇಱುಕೊಂಡಲಲ್ಲಿ ಮೈಯಿಕ್ಕಿ

ಮಾವಾರಿ ಮಾಂಕಾಳಿಗಳ್ತಿಯಿಂ ಪೊಱಮಟ್ಟು
ಕಾಮಾಕ್ಷಿ ಚಾಮುಂಡಿಗಳ್ತಿಯಿಂ ಪೊಱಮಟ್ಟು
ಮೊಳೆದುಪ್ಪವನೆತ್ತಿ ತವಕದಿಂ ಕುಡಿಕುಡಿದು
ಕಾಳಿಜವ ನಡಿಗಡಿಗೆ ಸವಿಸವಿದು ಚಪ್ಪಱಿದು
ತೇಗಿ ಬಾಳ್ಗೆಮ್ಮಯ್ಯ ವೀರಭದ್ರನೆ ಯೆನುತೆ
ತೂಗಾಡಿ ಪರಮಾಯು ವೀರಭದ್ರಾಯೆನುತೆ
ಹೊದ್ದಿ ಕುಳ್ಳಿರ್ದ್ದು ಮಿಗೆ ಸವಿಸವಿದು ನಿಗರುತುಂ
ಬಿದ್ದನಿಕ್ಕಿದನೆಮಗೆ ದಿಂದುಶೂಲಿಯ ಸುತಂ
ಆವನಾಯುಷಂ ಪಿರಿದು ಪೆಚ್ಚಲೇದಿಂದಿಗಾ*
ಎಂದು ಕುಣಿದಾಡುತುಂ ಮರುಳ ಪಡೆ ಹರಸುತಿರೆ
ನಿಂದದಂ ವೀರಭದ್ರಂ ನೋಡಿ ನಗುತಮಿರೆ

ದಕ್ಷಮುಖವಿಪಿನಕುಲದಾವಪಾವಕನೆಂದು
ದಕ್ಷಮುಖಜೀಮೂತಕುಳಮಹಾಬಳನೆಂದು
ಬಿರುದೆತ್ತಿ ಕರೆವ ಕಹಳೆಗಳ ಘನ ರವದೊಳಗೆ
ಧರೆ ನಡುಗೆ ಹೊಡೆವ ಭೇರಿಯ ಘನ ಧ್ವನಿಯೊಳಗೆ
ನಡೆತಂದನಪ್ರತಿಮ ವೀರಭದ್ರಂ ಮುಂದೆ
ಗುಡಿಗಟ್ಟಿತಲ್ಲಿ ಕೈಲಾಸದೊಳ್ನಲವಿಂದೆ
ಇಂದಿರ್ವ್ವಂದು ಹರನ ಗಣನಾಯಕರಿದಿರ್ಗೊಂಡು
ಅಧಟನಂ ಶೂಲಿಯಕುವರನಿದಿರ್ಗೊಂಡು
ಒಡಗೂಡಿ ಬರುತಿರಲು ಕೈಲಾಸಮೆಱಿದಿರಲ್
ಕಡುನೀರೆಯರ್ನೆರೆದು ನಿಂದು ಕರುಮಾಡದೊಳ್

ನೋಡೆ ನಲವಿಂ ವೀರಭದ್ರಂಗೆ ಕೈಮುಗಿದು
ಕೂಡೆ ಗಣಸಂತತಿಗೆ ಎರಗಿ ಹರುಷದೊಳಂದು
ಹಿಂದೆ ಬಪ್ಪವನಾರವಂ ದಕ್ಷನೆಂಬವನೆ
ಇಂದುಧರನಂ ದೇವಿಯುಂ ನಿಂದೆಗೈದವನೆ
ತಲೆಯೊಂದು ಪರಿ ದೇಹವೊಂದು ಪರಿಯುಪನವ್ವ

ಛಲವೇಕೆ ತಾನೇಕೆ ಲಜ್ಜೆಯಿಲ್ಲದನವ್ವ
ಬೇಕುಬೇಕೀ ಮೊಗಕೆ ದೇವನಂ ನಿಂದಿಸಲು
ಬೇಕುಬೇಕೀ ಮೊಗಕೆ ಯಾಗವಂ ಮಾಡಿಸಲು
ನಡೆತಪ್ಪರಮರರೇತಕೆ ತಮಗೇಕೆ ಖಳನಾಟ
ಒಡನಾಡಿಯರನಿಂತು ಮಾಡಿತ್ತವನ ಕೂಟ-
ವೆಂದು ಪುರನಾರಿಯರ್ಕೈಹೊಯ್ದು ನಗುತುಮಿರೆ
ನಿಂದು ನೆಲೆನೆಲೆಗಳೊಳ್ನೋಟಮಂ ಬೀರುತಿರೆ

ನಡೆತಂದು ಗಿರಿಶನರಮನೆಯ ನೊಲವಿಂ ಪೊಕ್ಕು
ಕಡುನೇಹದಿಂದುಕ್ಕಿ ಮೀಱಿ ಹರುಷಂ ಮಿಕ್ಕು
ವೀರಭದ್ರಂ ಬಂದು ದೂರದಿಂ ಪಶುಪತಿಗೆ
ಮಾರಮದಮಥನಂಗೆ ಕಾರುಣ್ಯವಾರಿಧಿಗೆ
ನೆನೆವರ ನಿಧಾನಕ್ಕೆ ಭಕ್ತಜನ ನವನಿಧಿಗೆ
ಮುನಿಜನರ ಧ್ಯಾನಕ್ಕೆ ಭಕ್ತಜನಸುರತರುಗೆ
ಶರಣಜನಜನಕಂಗೆ ಶರಣಾಬ್ಧಿಚಂದ್ರಂಗೆ
ಪರಮಾತ್ಮರೂಪಂಗೆ ಪಂಚೇಷುನಾಶಂಗೆ
ದುಷ್ಟಜನ ಶಿಕ್ಷಂಗೆ ಶಿಷ್ಟಜನ ರಕ್ಷಂಗೆ
ಸೃಷ್ಟಿಸ್ಥಿತಿಪ್ರಳಯ ಹೃಷ್ಟಂಗನಷ್ಟಂಗೆ
ವೇದಂಗಳರ್ಥಂಗೆ ವಾದಿಂಗತರ್ಕ್ಯಂಗೆ
ವೇದಾಂಗವೇದ್ಯಂಗೆ ನಾದ ಪ್ರಮೋದಂಗೆ
ಮೈಯಿಕ್ಕಿ ನಿಂದಂ ವಿರೂಪಾಕ್ಷಲಿಂಗಂಗೆ
ಕೈಯೆತ್ತಿ ಪೊಡಮಟ್ಟನೆಮ್ಮ **ಶಿವಲಿಂಗಂಗೆ**

ಇದೆ ದೇವ ಚಿತ್ತಯಿಸು ಖಳದಕ್ಷಸಂತಾನ-
ವಿದೆ ದೇವ ಬಿನ್ನಪಂ ದೋಷಿ ಸುರಸಂತಾನ-
ವಿದೆ ಚಕ್ರವಿದೆ ಕುಲಿಶವಿದೆ ಕಾಲನದಂಡ
ಇದೆ ಬೊಮ್ಮನಸ್ತ್ರವಿಂತಿದೆ ಸಕಲ ಋಷಿತಂಡ

ಇಂತೆಂದು ವೀರಭದ್ರಂ ಬಿನ್ನವಿಸಲಂದು
ಮುಂತೆ ವ್ಯೈಯಿಕ್ಕಿ ಕೈಮುಗಿದು ದಕ್ಷಂ ನಿಂದು

ದೇವ ಸರ್ವಾಪರಾಧಿಯನೆನ್ನ ನೀಕ್ಷಿಪ್ರುದು
ದೇವ ಮುಂದಱಿಯದಜ್ಞಂಗೆ ಕರುಣಿಪುದು
ಶಿಶು ತಪ್ಪಮಾಡಿದಡೆ ಕೊಂದರೊಳರೇ ದೇವ
ಪಶು ತಪ್ಪಮಾಡಿದಡೆ ಕೊಂದರುಂಟೇ ದೇವ
ಶಿಶುವಾನೆ ಪಶುವಾನೆ ತಂದೆ ಪಶುಪತಿ ನೀನೆ
ಶಶಿಧರನೆ ವಿಷಧರನೆ ದಯದಿಮೀಕ್ಷಿಸು ನೀನೆ
ಎಸೆವ ಲೋಕಾರಾಧ್ಯ ಕರುಣದಿಂದಂ ನೋಡ
ಅಸಮಗಣನಾಥ ದೂರ್ಜಟಿ ಕರುಣದಿಂ ನೋಡ
ಕರುಣಿಪುದನಾಥಂಗೆ ಕರುಣಿಪುದು ಭೀತಂಗೆ
ಕರುಣಿಸುವುದಲೆ ದೇವ ಗರ್ವದಿಂ ಬೆಂದಂಗೆ
ಎಂದು ದಕ್ಷಂ ಕೃಪಾಭಾವದಿಂದೊಱಲುತಿರೆ
ಇಂದುಧರನಭಯವಿತ್ತಂ ಸುರಪ್ಪೊರ್ಗಳುತಿರೆ
ಶತಯಜ್ಞದೊಂದು ಫಲಮಂ ವೀರಭದ್ರನಿಂ
ಹತನಾದ ದಕ್ಷಂಗೆ ಕೊಡಿಸಿದಂ ರುದ್ರನಿಂ

ಏನೆಂಬೆನುಬ್ಬಱೆಯ ಕರುಣೆ ಸುರರಂ ನೋಡಿ
ತಾನೆಂದನಂತವರ್ಗಭಯಕರವಂ ನೀಡಿ
ಎನ್ನವರ್ಗಳಿಲ್ಲದಲ್ಲಿಗೆ ಪೋಗದಿರಿಯೆಂದು
ಎನ್ನಹರನಱಿದಡ್ಡವೋಗವಾಗದಿರಿಯೆಂದು
ಮಱೆದು ಡಂಭಕರೆಂಬರಂ ಬೆರಸದಿರಿಯೆಂದು
ಮಱಹಿಲ್ಲದೆನ್ನ ಸಂತತ ಸೇವೆಯುತಿರಿಯೆಂದು

ಅಂದಮರ ಸಂತತಿಗೆ ಕಾರುಣ್ಯವಂ ಮಾಡೆ
ಮುಂದಿರ್ದ್ದ ವೀರಭದ್ರನನಳ್ಕಱಿಂ ನೋಡಿ
ತೆಗೆದು ತಳ್ಕೈಸುತಂ ಬಾಯತಂಬುಲವಿತ್ತು

ಸೊಗಯಿಪ ಕುಮಾರಂಗೆ ಬೀಳುಡೆಯ ನೊಲಿದಿತ್ತು
ಕೊಂಡಾಡಿ ವೀರಭದ್ರನನೆಲ್ಲರುಂ ನೋಡೆ
ಮುಂಡಾಡಿದಂ ಭಕ್ತತತಿ ಹರುಷಮಂಮಾಡೆ

ದಕ್ಷಾದಿಸುರರವಂತವರವರ ಲೋಕಕ್ಕೆ
ಅಕ್ಷಯಂ ತಾನೆ ಕಳುಹಿದನವರ ಲೋಕಕ್ಕೆ ೫೮
ಮಂದಿರದೊಳೆಸೆವ ಗಣನಾಯಕರೊಳೊಪ್ಪಿದಂ
ಇಂದುಧರನತುಳಬಳನಪ್ರತಿಮನೊಪ್ಪಿದಂ
ತನುವಿನೊಳಗಿರ್ಪ್ಪ ಶಿವಲಿಂಗ ನಿಂತೊಪ್ಪಿದಂ
ಮನಸಿಜಹರಂ ಕಾಲಹರನುಂ ಯಿಂತೊಪ್ಪಿದಂ
ಆತನಂಹರನನುಮಿತ್ರಬಂಧುವಿಂತೊಪ್ಪಿದಂ *
ಅತಿ ದಾನಿಯತಿ ಕರುಣಿಯತಿಶಯದೊಳಿಪ್ಪಿದಂ
ನತಜನಸುಖಾನಂದಮಯದೇವನೊಪ್ಪಿದಂ
ಹಂಪೆಸೆಯಲಂಪಿನಿಂ ಪ್ರಮಥನಿಧಿಯೊಪ್ಪಿದಂ
ಹಂಪೆಯ ವಿರೂಪಾಕ್ಷನನವರತಲೊಪ್ಪಿದಂ ೫೮

ಕಂದ ||

ನಂದೀಶಾದಿ ಗಣೇಶರೊ
ಳಂದಧಟಂ ಮೆಱೆದ ವೀರಭದ್ರನ ಶಿಶುವಾ
ನೆಂದು ಕರುಣಿಸುತಿರ್ಕ್ಕನ
ಗೆಂದುಂ ಶಶಿಮೌಳಿ ಹಂಪೆಯ ವಿರೂಪಾಕ್ಷಂ ||೧||

ಶ್ರೀ ವೀರಭದ್ರದೇವರ (ದಕ್ಷಾಧ್ವರದ) ರಗಳೆ ಸಮಾಪ್ತ
ಮಂಗಳಮಹಾ ಶ್ರೀ ಶ್ರೀ ಶ್ರೀ

# ಶ್ರೀ ಭೃಂಗೀಶ್ವರದೇವರ ರಗಳೆ

೬

ಕಂದ ॥ ಶೃಂಗಾರಾದಿ ಸಮಸ್ತ ರ
ಸಂಗಳನಭಿನಯಿಸಿ ತೋಱಿ ಮಿಗೆ ಮೆಚ್ಚುತ್ತಾ
ಲಿಂಗಿಸುತೆ ತನ್ನನಿತ್ತಾ
ಭೃಂಗೀಶಂಗೆಮ್ಮ ಹಂಪೆಯ ವಿರೂಪಾಕ್ಷಂ ೧

ಮಂದಾನಿಲ ರಗಳೆ

ಶ್ರೀಕೈಲಾಸ ಸಭಾಮಂದಿರದೊಳ್
ಲೋಕೇಶ್ವರನಿರೆ ಭದ್ರಾಸನದೊಳ್
ಕೆಲಬಲದೊಳ್ ದೇವಗಣಂ ಬಂದಿರೆ
ಜಲಜಭವಂ ಜಲಶಯನಂ ಬಂದಿರೆ
ಸುರರುಂ ಕಿನ್ನರರುಂ ಸಂಗಡದೊಳ್
ಗರುಡಗಾರ್ಂಧರ್ವರುವಂಗಡದೊಳ್
ಮುನಿಗಳ್ ಸಿದ್ಧರ್ ವಿದ್ಯಾಧರರುಂ
ಮನುಗಳ್ ಕಿಂಪುರುಷಖೇಚರರುಂ
ವೇದಂ ತರ್ಕಂ ತಾವೊಂದೆಸೆಯೊಳ್
ನಾದಂ ರಾಗಂ ಬೇರೊಂದೆಸೆಯೊಳ್
ರವಿಶಶಿಕೋಟಿಗಳಂತೊಂದೆಸೆಯೊಳ್
ಭುವನಾದಿತ್ಯಪತಿಗಳೊಂದೆಸೆಯೊಳ್
ಮಕುಟಂಗಳ ಪಙ್ತಿಗಳೊಂದೆಸೆಯೊಳ್
ಸಕಲಾನರ್ಘ್ಯಮಣಿಗಳೊಂದೆಸೆಯೊಳ್
ತರದಿಂ ಸುರನಾರಿಯರೊಂದೆಸೆಯೊಳ್
ನೆರೆದಿರೆ ಕಿನ್ನರಿಯರದೊಂದೆಸೆಯೊಳ್

ಸುರಪನನಲನಂತನೈರುತಿಗಳ್
ವರುಣನನಿಲವಿತ್ತಪ ದಿಕ್ಪತಿಗಳ್
ಬಂದಿರೆ ಚಂದ್ರಾಭರಣನ ಸಭೆಯೊಳ್
ಹೆಂದದ ಕಾಂತಿ ನೆಗೆದವೆಣ್ದೆಸೆಯೊಳ್
ಮೊಳೆತವು ಸುರಸತಿಯರ ತನುವಿಂದಂ
ಬೆಳೆದವು ರನ್ನದ ತೊಡಿಗೆಗಳಿಂದಂ
ದಳವೇಱಿದವು ಸಿತಾಂಬರದಿಂದಂ
ತಳಿತವವರ್ಗಳ ಮುಖರಸದಿಂದಂ
ಕವಲ್ವರಿದವು ಕಂಗಳ ಕಡೆಯಿಂದಂ
ತವೆ ಕುಸುಮಿತವಾದವು ನಗೆಯಿಂದಂ
ಶಿವಪದಸಂಗದ ಫಳಮಂ ಪಡೆದವು
ಸವೆಯದ ಸವಿಯಿಂ ಸಭೆಯಂ ತೋದವು

ಇಂತೆಸೆವಾ ನವರತ್ನಪ್ರಭೆಯೊಳ್
ಸಂತತವೊಪ್ಪುವ ಶರ್ವನ ಸಭೆಯೊಳ್
ಗಡಣದ ಕಿನ್ನರಿಯುತ್ತಾರೈಸಲ್
ಮೃಡನ ಮನಂ ಸುಖದಿಂ ಹಾರೈಸಲ್
ರಾಗದ ರಸದೊಳ್ ಸಭೆಯೀಸಾಡಲ್
ಲಾಗಿನ ಲಹರಿಯೊಳಗೆ ಮುಳುಗಾಡಲ್
ವಹಣಿಯ ತೆರೆಯೊಳ್ ತೇಂಕಾಡುತ್ತಿರೆ
ಬಹು ಸುಗತಿಗಳೊಳಗೋಲಾಡುತ್ತಿರೆ
ತಿರುಪಿನ ಸುಳಿಗಳೊಳಗೆ ಸುಳಿವುತ್ತಿರೆ
ತರದಿಂ ವಹಣಿಗಳೊಳೆ ಮಣಿವುತ್ತಿರೆ
ಕಂಪನದೋಳ್ಪೊಂಪುಳಿವೋಗುತ್ತಿರೆ
ಇಂಪಂ ಸೂಸುತೆ ಸಲೆ ಕರಗುತ್ತಿರೆ
ಕಿನ್ನಿರಿಯರ್ ಶಿವನಂ ಕೇಳಿಸುತ್ತಿರೆ
ಪನ್ನಗಭೂಷಂ ತಲೆದೂಗುತ್ತಿರೆ

ಇರಲೊಂದಣಕದ ಜವನಿಕೆ ಮೂಡಲ್
ಸುರಸಭೆ ಕೌತುಕದಿಂದಂ ನೋಡಲ್

**ಭೃಂಗೀಶಂ** ತಾನಾಗದೆ ಮಾಣಂ
ಹಿಂಗಿಸುಸಭೆಯುಂ ಬಂದಾ ಜಾಣಂ
ತೆಱಹುಂಗುಡು ಚಕ್ರಿಗೆ ಕಿನ್ನರಪತಿ
ಹೆಱಿಸಾರಿಂದ್ರಂ ತೊಲಗು ವಾಣೀಪತಿ
ಹೋ ಹೋ ಕಳಕಳವೇಕೆಂದೆನುತುಂ
ಅಹಾ ಹೊಸಪರಿ ಚಿತ್ತೈಸೆನುತುಂ
ನಂದೀಶಂ ನುಡಿವುತೆ ಹೆಱಿಸಾರಲ್
ಚಂದದ ರಸವಾದ್ಯಂಗಳ್ ಸೇರಲ್
ಸಂಗೀತರಸಂ ರಂಗಂ ಬೊಕ್ಕುದು
ಸಂಗಡಿಸಿದ ಕಡು ಸೊಗಸಂ ಮಿಕ್ಕುದು
ಆಡದ ಮುನ್ನಡ್ಡೈಸಲ್ತೊಡಗಿತು
ನೋಡದ ಮುನ್ನವೆ ಸೊಗಯಿಸತೊಡಗಿತು
ನೋಡುವರುಗಳ ಮನಂ ಜವನಿಕೆಯೊಳ್
ನಾಡೆ ಜಗಳವಾಡುತ್ತಿರೆ ಸಭೆಯೊಳ್

ದಿಧಿಕಾರವನುಗುಳಲ್ಮದ್ದಳೆಗಳ್
ಸುಧೆಯಂ ಸೂಸುತ್ತಿರೆ ವಾವುಜಗಳ್
ಸುಗತಿಯನುಗುಳುತ್ತಿರೆ ಕಹಳೆಗಳುಂ
ಸೊಗಸಂ ಸೊಂಪಿಸುತಿರೆ ಕರಡೆಗಳುಂ
ಕೌಸಾಳಂ ಸನ್ನೆಯೊಳೊತ್ತುತ್ತಿರೆ
ದೇಸಾಳಂ ನುಡಿಯೊಳೆ ಬೆಳೆವುತ್ತಿರೆ
ತಾಳಂ ನರ್ತನಮಂ ಕರೆವುತ್ತಿರೆ
ಮೇಳವಣೆಗೆ ಶಬ್ದಂ ಕೊಡುತ್ತಿರೆ
ಬಿಂಕದ ಕೌಸಾಳಂ ತುಳ್ಕಾಡಲ್
ಭೋಂಕನೆ ಮುಂದಣ ಜವನಿಕೆಯೋಡಲ್

ಹೊಗೆ ತಗ್ಗಿದ ಹುತಹವನಂತಿರ್ದ್ದಂ
ಮುಗಿಲೋಸರಿಸಿದ ರವಿಯಂತಿರ್ದ್ದಂ
ಛಾಯವಡಂಗಿದ ಜ್ಯೋತಿಯೊಳಿರ್ದಂ
ಮಾಯೆಯಡಂಗಿದ ಹರನಂತಿರ್ದ್ದಂ

ಇರಲೊಪ್ಪಿತು ಭೃಂಗಿಯ ಶೃಂಗಾರಂ
ಶಿರಮಧ್ಯದ ಲಿಂಗದ ವಿಸ್ತಾರಂ
ಭಾಳಂ ತೀವಿದ ಭಸಿತದ ತಿಳಕಂ
ತಾಳಕ್ಕೊಲೆದಾಡುವ ಕೈಚಳಕಂ
ಫಣಿಕುಂಡಲ ಮುತ್ತಿನ ಹಾರಂಗಳ್
ಮಣಿಖಚಿತದ ರತ್ನದ ಮುದ್ರಿಕೆಗಳ್
ಕೇಯ್ಯೂರಂ ಹೊಸ ವಜ್ರದ ಕಂಕಣ
ಒಯ್ಯಾರಂ ಮಿಗೆ ಗೆಜ್ಜೆಯ ಚಲ್ಲಣ-
ವೆಸೆಯಲ್ ಸರ್ವಾಂಗದ ಹೊಸ ಭಸಿತಂ
ಮಸಗಲ್ ಕಾಲ್ತೊಡರು ಝುಣಝುಣಿತಂ
ಕೆಯ್ಯೊಳಗೊಪ್ಪಲ್ ನರ್ತನ ದಂಡಂ
ಮೆಯ್ಯೊಳ್ ಹೊಳೆಯಲ್ ಗತಿಗಳ ತಂಡಂ
ಮೊಳೆಯಲ್ ಸರ್ವಾಂಗದೊಳೆ ಸುಗತಿಗಳ್
ಬೆಳೆಯಲ್ ತ್ರಿಭಂಗಿಗೊಂಡಾಕೃತಿಗಳ್
ಮುಂದುವರಿಯೆ ಮೆಚ್ಚುಗಳೋಲಗದೊಳ್
ಸಂದಣಿಸಲ್ಕಾಹಂಗಳ್ಮುಖದೊಳ್
ಕಡಗಂಗಳ ಕೊನೆಯೊಳು ಸೂಳೈಸಲ್
ನಿಡುವುರ್ವಿನ ತುದಿಯೊಳ್ಮೇಳೈಸಲ್
ಕರತಳದಿಂ ಬಹು ಗತಿಗಳ ಸೂಸುತೆ
ಚರಣತಳದೆ ಹೊಸ ತಾಳಂ ಗುಟ್ಟುತೆ
ತಡವಿ ತಡವನಾಡುತೆ ಹಿಮ್ಮೆಟ್ಟುತೆ
ಕಡು ಸೊಗಸಂ ಕಾಳಾಸದೆ ತೋಱುತೆ

ನಡೆದು ನಡೆದು ಲಾಗಿನ ಲೋಲಾಡುತೆ
ತಡೆದು ತಡೆದು ತೂಗುತೆ ಲೋಲಾಡುತೆ
ಪಿಡಿದುಂ ನೆಗದಾಕಾಶದಿ ನಿಲುತಂ
ತರಹರಿಸುತೆ ಪಂಜರದೊಳ್ತಿರುತಂ
ಥಾಳದೊಳ್ಕುಳುತ್ತುಂ ಬಳುಕುತ್ತುಂ
ತಾಳವನವಯುವದಿಂ ಪಿಡಿವುತ್ತುಂ
ಆಡಿತೆ ಗತಿ ನಿಂದುದೆ ತಾಳಾಸಂ
ನೋಡಿತೆ ಸೊಗಸಿದ್ದುದುದೆ ವಿಳಾಸಂ
ತಾನಾಗಿರೆ ರಸಮಯನಾಗಾಡುತೆ
ನಾನಾವಿಧ ಬಹು ಗತಿಗಳ್ ತೋಱುತೆ
ಭಾಪಾವೃಜೆ ಮದ್ದಳಿರೇ ಯೆನುತುಂ
ಭಾಪ್ರರೆ ಕಹಳೆ ಸುದೇಯೆಂದೆನುತುಂ
ದೇವ್ರರೆ ಹೊಸತುಗ್ಗಡನೇಯೆನುತುಂ
ರಾವ್ರರೆ ತಾಳಂ ಥರುರೇಯೆನುತುಂ
ಅವಧಾರುರೆ ಮೇಳವಣೇಯೆನುತ್ತುಂ
ಅವಧಾರಭವನೆ ಕರುಣೆಯೆನುತ್ತುಂ

ನೆಗೆದು ತಿರುಗಿ ಕೈಯ್ಯೂರಿ ನಿಲುತ್ತುಂ
ಬಗೆಯದೆ ತಲೆಯಿಂ ನಡೆದಾಡುತ್ತುಂ
ಬರೆಯುಂದಂ ಹರಿದಾಡಿ ನಿಲುತ್ತುಂ
ಬೆರಲೂರಿಯೆ ತಿರ್ರನೆ ತಿರುಗುತ್ತುಂ
ಕೆಯ್ಯೊಳ್ಕಾಲೊಗದಂತಾಡುತ್ತುಂ
ಮೆಯ್ಯೆಲ್ಲಂ ಮುಖವಾದಂತಿರುತುಂ
ಕೆಲದೊಳ್ ಬಲದೊಳ್ ಸುತ್ತೆಣ್ದೆಸೆಯೊಳ್
ನೆಲದೊಳ್ಮುಗಿಲೊಳಗಂಬರದೆಡೆಯೊಳ್
ಹೊಸ ಕರಣಂಗಳ ನೀಡಾಡುತ್ತಿರೆ
ಶಶಿಧರನೊಲವಿಂ ತಲೆದೂಗುತ್ತಿರೆ

ಹೆಸರಿಡಲಮ್ಮದ ಗತಿಗಳನಾಡುತೆ
ಹೊಸ ಹೊಸ ಪರಿಗಳ ರೀತಿಯನಾಡುತೆ
ಮನದೊಳೆ ದೇಹವನಡಗಿಸಿಯಾಡುತೆ
ಮನವೇ ತನುವಾದಂತಿರಲಾಡುತೆ

ಗತಿಗೆ ಮನಂ ಹೊಸ ತನುವಾದಂತಿರೆ
ಗತಿಗೆ ತನುವಿನವಯವವಾದಂತಿರೆ
ಸಮ ವಿಷಮಂಗಳ ಪರಿಗಳನಾಡುತೆ
ಕ್ರಮದಿಂ ನವರಸಗತಿಗಳನಾಡುತೆ
ಧಾರುಣಿಯಂತಿರೆ ಸ್ಥಿರದಿಂದಾಡುತೆ
ವಾರ್ಧಿವೊಲ್ ನಿರ್ಮಳನಾಗಾಡುತೆ
ಅನಲನವೊಲುಜ್ವಲನಾಗಾಡುತೆ
ಅನಿಲನವೋಲ್ ಸುತ್ತಂ ಸುಳಿದಾಡುತೆ
ಗಗನದ ವೋಲ್ತನ್ಮಯನಾಗಾಡುತೆ
ಮೃಗಧರನಂತಿರೆ ಹೊಸ ಕಳೆಯೇಱುತೆ
ದಿನಕರನಂತಿರೆ ದೆಸೆಯಂ ಬೆಳಗುತೆ
ಎನೆ ಸಂಜನದೊಲು ಸಂಜನಿಸುತೆ
ಎಳೆವಿಸಿಲಂತಿರೆ ಬಣ್ಣಂ ದೋಱುತೆ
ಬೆಳುದಿಂಗಳವೋಲ್ತಂಪಂ ಬೀಱುತೆ
ಕೋಗಿಲೆಯಂದದಿ ಸರಗೈದಾಡುತೆ
ರಾಗದಿ ಗಿಳಿಯಂದದಿ ನುಡಿದಾಡುತೆ
ಅಳಿಯಂತಿರೆ ಝೇಂಕಾರದೊಳಾಡುತೆ
ಕಳಹಂಸೆಯ ವೊಲ್ಮೆಲ್ಲನೆ ನಡೆಯುತೆ
ಎಳೆಲತೆಯಂದದಿ ತೂಗಾಡುತ್ತುಂ
ಎಳೆಮಿಂಚಿನ ವೋಲ್ ಹೊಳೆದಾಡುತ್ತುಂ
ಮುಗಿಲಂತಿರೆ ಮೊಳಗುತೆ ಬಾದಾಡುತೆ
ಮಿಗೆ ಚಾದಗೆಯಂತಿರೆ ನಲಿದಾಡುತೆ

ನವಿಲಂತಿರೆ ಸವಿದನಿಗೊಟ್ಟಾಡುತೆ
ನವ ಪ್ರೇರಣೆಯಿಂ ದೇವಂ ನೋಡುತೆ
ನಲವಿಂ ಕಾಲೊಳ್ಕಟ್ಟಿದ ಗೆಜ್ಜೆಗ-
ಳುಲಿಯಲ್ಗತಿಗಳನುಗುಳುವ ಹೆಜ್ಜೆಗ-
ಳೆಳವಡೆ ಪಯುಗತಿಯುಂ ಬಾಜಿಸುತುಂ
ಸೆಳೆವುತೆ ಹಿಮ್ಮೆಟ್ಟುತೆ ನಿಂದಿರುತುಂ
ಪದತಳದೊಳೆ ತಟಗಿಱಿಂದೆನುತುಂ
ಮೃದುಗತಿಯೊಳ್ ಘುಲಘುಲಕೆಂದನುತುಂ
ಚರಣತಳದೊಳುಗ್ಘಡಿಸುವ ತೆಱದಿಂ
ನೆರೆದ ಸುಗತಿ ಕಾಲೆಱಗುವ ತೆಱದಿಂ
ಗತಿ ಪುಳಕಿತವಾಗಿರೆ ಹೆಜ್ಜೆಗಳಿಂ-
ದತಿ ಚಲ್ವಿನ ಶಬ್ದದ ಹೆಜ್ಜೆಗಳಿಂ
ಬಾರಿಸುತುಂ ಕಿವಿಗಿನಿದಂ ತೋಱುತೆ
ಹಾರೈಸಲ್ ಬಹು ರೂಪಂದೋಱುತೆ

ದಕ್ಷನ ಮುಖಮಂ ಕೆಡಿಸಿದ ಪರಿಯುಂ
ತ್ರ್ಯಕ್ಷಂ ತ್ರಿಪುರವನುರುಪಿದ ಪರಿಯುಂ
ಕಾಮನನಭವಂ ನೋಡಿದ ಪರಿಯುಂ
ಪ್ರೇಮದಿ ರತಿ ಮಿಗೆ ಶೋಕಿಪ ಪರಿಯುಂ
ಗಿರಿಜೆ ತಪಸ್ಸಿನೊಳಗಿರ್ದ ಪರಿಗಳಂ
ಕರುಣದೊಳೀಶಂ ಬಂದ ಪರಿಗಳಂ
ಪ್ರೇತಪತಿಯನಂದುರುಪಿದ ಪರಿಯುಂ
ಶ್ವೇತಂಗೊದವಿದ ಕರುಣದ ಪರಿಯುಂ
ಉಪಮನ್ಯು ತಪಂಬಟ್ಟ ಪರಿಗಳಂ
ಕಪರ್ದಿ ಪಾಲ್ಗಡಲಿತ್ತ ಪರಿಗಳಂ
ಪುಲಿಯ ದೊಗಲನುಗಿದುಟ್ಟ ಪರಿಗಳಂ
ಕಲಿ ಗಜಚರ್ಮವ ತೊಟ್ಟ ಪರಿಗಳಂ

ತಡೆಯದೆ ಕಡಲಂ ಕಡದ ಪರಿಗಳಂ
ಕಡೆಯಲ್ ಹೊಸ ಬಿಸವುಗುಳ್ದ ಪರಿಗಳಂ
ಸುರಸಂತತಿ ಬಿಗುತೊರ್ೀಡಿದ ಪರಿಯುಂ
ಕೊರಳೊಳ್ಗರಳವ ಧರಿಸಿದ ಪರಿಯುಂ
ದೇವಂ ಮನದೊಳ್ಮಿಗೆ ಹಿಗ್ಗುತ್ತಿರೆ
ಭಾವರಸದ ಲಹರಿಯೊಳೋಲಾಡುತೆ

ನಂಬಿಗೆ ಕುಂಟಣಿಯೋದ ಪರಿಗಳಂ
ನಿಂಬಿಗೆ ಸೂಱೆಯನಿತ್ತ ಪರಿಗಳಂ
ಭೋಗಣ್ಣನೊಡನೆ ಪೋದ ಪರಿಗಳಂ
ರಾಗದೆ ಪುರದೊಳ್ನಿಂದ ಪರಿಗಳಂ
ಕಣ್ಣಪ್ಪಂ ಕಣ್ಣಿತ್ತ ಪರಿಗಳಂ
ಬಣ್ಣಿಸೆ ಶರ್ವಂ ಮೆಱೆದ ಪರಿಗಳಂ
ಕಲ್ಲಂ ಕೊಂಡವನಿಟ್ಟ ಪರಿಗಳಂ
ನಿಲ್ಲದೆ ವರವಂ ಕೊಟ್ಟ ಪರಿಗಳಂ
ಬೇಡಂ ಬೇಂಟೆಯನಾಡಿದ ಪರಿಯುಂ
ಊಢೀಶಂ ದಿಟ ಮಾಡಿದ ಪರಿಯುಂ
ಓಹಿಲನಂ ಕೊಂಡೊಯ್ದಾ ಪರಿಯುಂ
ನೇಹದೊಳುದ್ಭಟನೈಯ್ದಿದ ಪರಿಯುಂ
ಅಲ್ಲಯ್ಯನ ಕೈಯೊಕ್ಕ ಪರಿಗಳಂ
ಬಲ್ಲಾಳನ ಮನವಱಿದ ಪರಿಗಳಂ
ಏಕಾಂತದ ರಾಮಯ್ಯನ ಪರಿಯುಂ
ಲೋಕಾಂತವದಂ ಮಾಡಿದ ಪರಿಯುಂ
ಬಸವಣ್ಣಂ ವಿಷವುಂಡ ಪರಿಗಳಂ
ವಿಷವುಂ ಪ್ರಸಾದವಾದ ಪರಿಗಳಂ
ಕನ್ನೆಯುಳುತೆ ಪಾಲೆಱೆದ ಪರಿಗಳಂ
ಬಿನ್ನಣದಿಂ ತಾನುಂಡ ಪರಿಗಳಂ

ಚೆನ್ನನ ಮನೆಯೊಳು ಸಲಿಸಿದ ಪರಿಯುಂ
ಮನ್ನಿಸಿ ಚೋಳಂಗೊಲಿದಿಹ ಪರಿಯುಂ
ಚೇಲಾಳನನರಿದಿತ್ತ ಪರಿಗಳಂ
ಸೋಲದೆ ಮಗನಂ ಕರೆದ ಪರಿಗಳಂ
ಕಕ್ಕನ ಕಂಕರಿಗಾಡಿದ ಪರಿಯುಂ
ಚಿಕ್ಕನನಭವಂ ನೋಡಿದ ಪರಿಯುಂ
ದಾಸನನಭವಂ ಕಾಡಿದ ಪರಿಯುಂ
ಕೇಶವರಾಜಂಗಂಜಿದ ಪರಿಯುಂ
ಗುಂಡಯ್ಯನ ಮುಂದಾಡಿದ ಪರಿಯುಂ
ತಂಡೇಶ ಶರಣರು ಮೆಱೆದ ಪರಿಗಳಂ
ಹಂಪೆಯೊಳಗೆ ಸಲೆ ನೆಲಸಿದ ಪರಿಯುಂ
ಹಂಪೆಯಂ ಹರಿಗಂಗೊಲಿದ ಪರಿಗಳಂ
ಇವು ಮೊದಲಾಗಿರೆ ಶಂಕರನೊಲವಿಂ
ಸವಿದಾಡಿದ ಸುಖಲೀಲೆಯೊಳೊಲವಿಂ
ಬಹು ರೂಪಗಳಿಂ ಬಂದಾಡುತ್ತುಂ
ಬಹಳ ರಸಂಗಳೊಳೋಲಾಡುತ್ತುಂ

ಆಡುತ್ತಾಡುತ್ತೇಡಿಸಿ ನಿಲುತಿರೆ
ನೋಡುವ ಸಭೆ ಮಿಗೆ ಘೊಳ್ಳನೆ ನಗುತಿರೆ
ಸಭೆಯ ಮೆಯ್ಯ ಜೊಮ್ಮೆಲ್ಲಂ ಹಾಱಲ್
ಅಭವನ ಮುಖದೊಳ್ ನಸು ನಗೆದೋಱಲ್
ಪ್ರಹಸನ ರಸಮುಂ ತೊಡಗಿದನಾಗಳ್
ಸಹಸದ ನಗೆಗಳ್ಮೊಡಲ್ಮೊಗದೊಳ್
ಕೋಡಗಿಯಾಟವನೇಱಿಸಿಕೊಂಡಂ
ನೋಡಿ ನಗುತ್ತಿರೆ ದೇವರ ತಂಡಂ
ತಲೆಯೊಳ್ಸುತ್ತಿದ ಕವಡಿಕೆ ದಂಡೆಗ–
ಳೊಲವಿಂ ಪಲ್ಗಳೊಳಡಿಸಿದ ಕವಡೆಗ–

ಳ್ಕಣ್ಣೊಂದಱಿಱೊಳಿಕ್ಕಿದ ಬೆಳ್ಗವಡಿಕೆ
ಕಣ್ಣಂ ಮೆಳ್ಳಿಸಿ ನೆತ್ತಿಯ ಚೆಂಡಿಕೆ
ಹಲುಗಿರಿಯುತೆ ಪುಬ್ಬಂ ನೆಗೆಪುತ್ತುಂ
ಬಲುಗಿವಿಯುಂ ಮುಂಡಿಸಿ ಮಣಿವುತ್ತುಂ

ಬಾಯುಂ ತೆಱೆವುತೆ ಬಱಿದೆ ನಗುತ್ತುಂ
ಆಯೆಂದೀಶನನೇಡಿಸಿ ನಿಲುತುಂ
ಕೊಂಕಿ ನಡೆದು ಕೆಯ್ಯಂ ಮುಱುಕಿಸುತುಂ
ಟೊಂಕಮನುಱುಗಿಸಿ ನಿಂದೇಡಿಸುತುಂ
ಮೊಳಕೈ ಮುಂಗೈಗಳನಾಡಿಸುತುಂ
ಮೊಳಕಾಲಿಕ್ಕುತ್ತೆಱಗುತೆ ನಿಲುತುಂ
ಕಾಲುಂ ಕೆಯ್ಯಂ ಚೆಂಗೊಂಡಾಗಿರೆ
ಮೇಲುಂ ತಳವುಂ ಕೆಲವುಂ ಡೊಂಕಿರೆ
ಕುಳ್ಳಿರ್ದೇಳುತ್ತುಂ ಬೀಳುತ್ತುಂ
ಅಳ್ಳಿಯನೆರಡು ಕರದಿ ಬೆಱಟುತ್ತುಂ
ಮೆಳ್ಳಿಸಿ ನೋಡುತ ಪುಬ್ಬಂ ಕೆತ್ತುತೆ
ಘೊಳ್ಳನೆ ಸಭೆ ನಗೆ ಪಲ್ಲಂ ಕಿರಿವುತೆ
ಅಡ್ಡಂ ತಿಗಟಂ ವಿಸಟಂ ಬರುತುಂ
ಗುಡ್ಡಿಸಿ ಮುಗಿಲುದ್ದಕೆ ನೆಗೆಯುತ್ತುಂ
ಅಣಕಂ ಮೆರೆವುತೆ ಮೆಯ್ಯಿಕ್ಕುತ್ತುಂ
ತ್ರಿಣಯನ ನೋಡುತೆ ಗಹಗಹಿಸುತ್ತುಂ
ಮೂಗಿನ ತುದಿಯುಂ ಮೆಳ್ಳಿಸಿ ನೋಡುತೆ
ತೂಗಿ ತೊನೆದು ಕೈಚಪ್ಪಳೆಗುಟ್ಟುತೆ
ತುದಿಗಾಲೊಳು ನಿಲುತಂದೊಲೆದಾಡುತೆ
ಬೆದಱಿದರಂತಿರೆ ಬೆಚ್ಚುತ್ತೋಡುತೆ
ನಿಂದಿರುತೊಂದೇ ಮುಡುಹಾಡಿಸುತುಂ
ಮುಂದಿಯ ನೇಡಿಸುತವ್ವಳಿಸುತ್ತುಂ

ಮುಡುಹುಗಳಂ ಕೊರಳೊಳು ಪತ್ತಿಸುತುಂ
ಕಡೆವಾಯೊಳೆ ತುಟಿಗಳ ಜೋಲಿಸುತುಂ
ಬಱಿದೇ ಧ್ಯಾನಿಸಿ ಬೆಱಗಾಗುತ್ತುಂ
ಮಱೆದಂತೇನಕ್ಕೆಯುನಱಿಸುತ್ತುಂ
ಹೊಟ್ಟೆಯನಾಡಿಸುತಂ ಹೊಂಗಿಸುತುಂ
ನೀಟ್ಟೋಡಲಾಗುತ್ತಂ ನಿಂದಿರುಹುತುಂ
ಕೊಂಕಿದ ದೇಹಮನುರುಗಿಸಿ ನಡೆವುತೆ
ಬಂಕಿದ ಮುಖದೊಳ್ ಬಾಯ್ದೆಱೆದುಲಿವುತೆ
ತೋಳಂ ಬೀಸುತೆ ತೂಗಾಡಿಸುತುಂ
ನೀಳಂಮಾಡಿಯೆ ಮೊಗದಿರುತ್ತುಂ
ದಿಟ್ಟಿಸಿ ನೋಡುತ್ತಂ ಜಿಗಿಲುತ್ತುಂ
ನೆಟ್ಟಂದದಿ ನಿಂದಿರ್ದು ನಗುತ್ತುಂ
ತುಟಿ ಮಿಡುಕುತ್ತಿರೆ ಹಲು ಹಱೆಗುಟ್ಟುತೆ
ಕಟಿಯಲುಗುತ್ತಿರೆ ಯಡ್ಡಂ ಮೆಟ್ಟುತೆ
ಕುಂಟನವೋಲ್ಕೊಂಕಂಡಿಗಳ ನಿಡುತುಂ
ತುಂಟನ ವೋಲ್ಪೆಚ್ಚಡಿಗಳನಿಡುತ್ತುಂ
ಹೆಳವನ ವೋಲ್ಮೊಳಕಾಲಿಕ್ಕುತ್ತುಂ
ಗಳೆಯಂದದೆ ಸೈವೆಱಗಾಗುತ್ತುಂ
ಎದ್ದೆದ್ದೆತ್ತಿದ ವೋಲ್ ನಿಲ್ಲುತ್ತುಂ
ಬಿದ್ದಂ ಬಿಲ್ಲಂದದೆ ಬೆಱವುತ್ತುಂ
ಮೂಗಂ ಪತ್ತಿಸಿ ಕೊಟಕೆಯನಾಡಿಸಿ
ಮೋಗಂ ಮೆಳ್ಳಿಸಿ ಕೊರಲಂ ತೂಗಿಸಿ
ತಲೆಯ ನಿವಾಳಿಸಿ ಕರವಂ ಬಾರಿಸಿ
ನಿಲವಂ ಕೊಂಕಿಸಿ ಬೆರಲಂ ಬಂಕಿಸಿ
ಸುರಪನನೇಡಿಸುತಂ ಹಾಱಿಸುತುಂ
ಶರಣರ ಚರಣವ ಪಿಡಿದಾಡುತ್ತುಂ
ದೇವನ ನುರುಗಿಸಿ ನೋಡಿ ನಗುತ್ತುಂ

ದೇವಸಭೆಯನೊಲಿದಲ್ಲಾಡಿಸುತಂ
ನಗೆಗಳನೆಲ್ಲರ ಮೊಗದೊಳ್ಚೆಲ್ಲುತೆ
ಬಗೆಗಳ ನಗೆಯುಂ ಹೊರಹೊಂಟಾಡುತೆ
ನೋಡುವರಂ ನಗೆ ಗೂಡಾಗಿಸುತ್ತುಂ
ನೋಡುವರವಯವವಂ ನಗಿಸುತ್ತುಂ
ಬಂದಾಡುತ್ತಿರೆ ಹರನೋಲಗದೊಳ್
ಹೆಂದದ ನಗೆಗಳ್ ಮಸಗಲ್ಕಾಗಳ್
ಹೊಸ ಭಕ್ತಿಯ ಕರುವಿನವೊಲವಂತಿರೆ
ಶಶಿಧರನಚ್ಚರಿಯೊಳ್ಮೈಜಿವುತ್ತಿರೆ
ಹರಕೀರ್ತಿಯನೇ ಕೊಂಡಾಡುತ್ತಿರೆ
ವರ ಮೂರ್ತಿಯನೆ ಕಣ್ಣೊಳಗಿಟ್ಟಿರೆ
ಮೈಸೋಂಕಂ ತನ್ನೊಳ್ ತೆಗೆವುತ್ತಿರೆ
ಕೈ ಶಿವಪೂಜೆಗೆ ಲವಲವಿಸುತ್ತಿರೆ
ತನ್ನ ಮಱವುತೆ ಪರವಶನಾಗಲ್
ಭಿನ್ನಂದೋಱದ ಸಮುಸುಖಿಯಾಗಲ್
ಹರ ಸಾತ್ವಿಕ ಭಕ್ತಿಯ ರಸದೋಱುತೆ
ಕರುಣರಸಂ ಹರನೊಳ್ ಕೈಮೀಱುತೆ
ಹಿಡಿದೆತ್ತಿದ ಭೃಂಗೀಶನನೀಶಂ
ಅಡಿಗಡಿಗಪ್ಪಿದನಾ ಗಿರಿಜೇಶಂ
ಆಲಿಂಗಿಸಿ ಮಯ್ಯಂ ತಡವುತ್ತಂ
ಸಾಲದಿದೆನ್ನುಂ ಕೊಟ್ಟೆನೆನುತ್ತಂ
ಹಂಪೆಯ ವಿರುಪಂ ಕರುಣಂ ಮಾಡಲ್
ಸೊಂಪಿಂ ಹೊಗಳಲ್ ಸುರಸಭೆ ನೋಡಲ್
ದೇವ ಶರಣಸಂಕುಳಪರಿಪಾಲಕ
ದೇವ ಶರಣ ಮುಗುದಾಜನಲೋಲಕ
ದೇವ ಸಕಲವರ ವಿದ್ಯಾವಲ್ಲಭ
ದೇವ ಅನೇಕ ಶ್ರುತಿತತಿ ದುರ್ಲಭ

ದೇವ ಸಮಸ್ತ ಪ್ರಮಥಾನಂದಿತ
ದೇವ ಜನಾರ್ಧನ ಕಮಳಜವಂದಿತ
ದೇವ ನತಾಖಂಡಲ ಸುರಮಂಡಲ
ದೇವ ವಿರಾಜಿತ ಫಣಿಪತಿಕುಂಡಲ

ಎಂದು ಪೊಗಳುತಿರೆ ಸಂತಸದಿಂದಂ
ಇಂದುಧರಂ ಹಿಗ್ಗುತೆ ನಲವಿಂದಂ
ವರವಂ ಕುಡಲಿಕೆ ಧನಿಗೆಯಿವುತ್ತಂ
ಸುರಸಂತತಿಗಭಯವನೀವುತ್ತಂ
ಪರಿಪರಿಯಳ್ಕರೊಳೋಲಾಡಿಡುತ್ತಂ
ಶರಣತತಿಗೆ ಭಕ್ತಿಯನೀವುತ್ತಂ
ಭೃಂಗೀಶನನಡಿಗಡಿಗಪ್ಪುತ್ತಂ
ಹಿಂಗದೆ ನೇಹದಿ ಸಲೆ ಮೆಚ್ಚುತ್ತಂ
ಹರಿಬೊಮ್ಮರ ವರ ಗುರುವೊಪ್ಪಿರ್ದ್ದಂ
ಶರಣಜನದ ಸುರತರು ವೊಪ್ಪಿರ್ದ್ದಂ
ಭಕ್ತರ ಪರುಷದ ಕಣಿಯೊಪ್ಪಿರ್ದ್ದಂ
ಭಕ್ತರ ಚಿಂತಾಮಣಿಯೊಪ್ಪಿರ್ದ್ದಂ
ಭಕ್ತರ ಮತಿಯುನ್ನತಿಯೊಪ್ಪಿರ್ದ್ದಂ
ಭಕ್ತರ ಕಣ್ಣುಂಗತಿಯೊಪ್ಪಿರ್ದ್ದಂ
ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದ್ದಂ
ಹಂಪೆಯ ವಿರುಪಂ ತಾನೊಪ್ಪಿರ್ದ್ದಂ

ಕಂದ॥ ಪರಮೋತ್ಸಾಹದಿ ಭೃಂಗೀ
ಶ್ವರನಂ ಕೊಂಡಾಡಿ ನೋಡಿ ನಲವೇಱುವ ಶಂ-
ಕರನೊಲ್ದು ಭಕ್ತಿಸುಖಮಂ ।
ಕರುಣಿಸುತಿರ್ಕೆಮಗೆ ಹಂಪೆಯ ವಿರೂಪಾಕ್ಷಂ ॥

ಶ್ರೀ ಭೃಂಗೀಶ್ವರದೇವರ ರಗಳೆ ಸಮಾಪ್ತಂ

ಮಂಗಳ ಮಹಾ ಶ್ರೀ ಶ್ರೀ ಶ್ರೀ

# ಪಿಂಡೋತ್ಪತ್ತಿಯ ರಗಳೆ

## (ಸಂಸಾರ ವ್ಯಾಮೋಹ ನಿರಸನ)

## ೭

ಕಂದ॥ ದೇವಾ ಪುಟ್ಟುವ ಜೀವಿಪ
ಸಾವಸಿರೋಧಾಳಿಗಾಱೆನಾಱೆಂ ಗುರುವೆ
ಕಾವುದು ಕರುಣಿಸಿ ನಿಜಪದ
ನೀವುದು ಮದನಾರಿ ಹಂಪೆಯ ವಿರೂಪಾಕ್ಷಾ॥

### ಲಲಿತ ರಗಳೆ

ಶ್ರೀವಿರೂಪಾಕ್ಷಲಿಂಗಪ್ರಭುವೆ ನೀವಿಂತು
ಭಾವಿಸುತೆ ಕಟ್ಟಿದ ಮಹಾಕಲ್ಪನೆಯನಾಂತು
ತಿರುಗುತಿರ್ದ್ದಪೆನಖಿಳ ಘೋರ ಸಂಸಾರದೊಳ್
ಪುರಹರನೆ ನಿನ್ನನಱಿಯದೆ ಜನ್ಮಶರಧಿಯೊಳ್
ಎಂತೆಂತು ನೀವು ಕಟ್ಟಿದ ಪೂರ್ವಕಲ್ಪನೆಗೆ
ಅಂತಂತೆ ಮೆಯ್ಯೊಡ್ಡಿಕೊಂಡೆನಯ್ಯಾತನೆಗೆ
ಕಲ್ಲಾಗಿ ಮಣ್ಣಾಗಿ ಕುಣಿಯಾಗಿ ತೆವರಾಗಿ
ಹುಲ್ಲಾಗಿ ಲತೆಯಾಗಿ ಗಿಡುವಾಗಿ ಮರನಾಗಿ
ಪುಳುವಾಗಿ ಖಗವಾಗಿ ಕಪಿಯಾಗಿ ಮೃಗವಾಗಿ
ಬಳಸಿ ಬಂದಾವಾವ ಯೋನಿಗಂ ತನುವಾಗಿ
ಬೇಳಾಗಿ ಬೆಂಡಾಗಿ ಹಾಳಾಗಿ ಕಾಳಾಗಿ
ಗೋಳುಂಡೆಗೊಂಡು ಬಂದೆಂತಕ್ಕೆ ಪಶುವಾಗಿ
ಏನೇನನೆಂಬೆನೆಂಭತ್ತುನಾಲ್ಕುಂಲಕ್ಷ
ಯೋನಿಯೊಳ್ನೆಱೆ ತಿರುಗಿಬರುತುಂ ವಿರೂಪಾಕ್ಷ

ಕುರುಡನೆಂತಕ್ಕೆ ಲಾವಿಗೆವಿಡಿದತೆಱನಾಗೆ
ಧರೆಯೊಳಗೆ ಕಾಕತಾಳಂ ನ್ಯಾಯದಂತಾಗೆ
ಎಂತುಂ ಘುಣಾಕ್ಷರನ್ಯಾಯಮೆಂಬಂತಾಗೆ
ಎಂತಕ್ಕೆ ಮನುಜ ಜನ್ಮಕ್ಕೆ ಬರಲನುವಾಗೆ
ತಾಯಿ ತಂದೆಯ ಶುಕ್ಲಶೋಣಿತಂ ನೆವಮಾಗೆ
ಆಯುವಿಂದವಯವಂಗಳು ಬಲಿವುತೊಂದಾಗೆ
ತಾಯ ಪೊಟ್ಟೆಯ ಕರುಳ್ಸುತ್ತೆ ಮಿಗೆ ಸಡೆವುತುಂ
ತಾಯತ್ತ ಮಗ್ಗುಲಾದತ್ತತ್ತ ಕೆಡೆಯುತುಂ
ಉದರಗತ ಶಿಖಿಯ ಸೆಕೆ ತಾಗೆ ಮಿಗೆ ಕಂದುತುಂ
ಪುದಿದ ಮಾಂಸಂ ಮುಸುಕಲುಬ್ಬಸದೊಳೊಂದುತುಂ
ಕ್ರಿಮಿಕೀಟಕಂ ಕ್ಷುದ್ರಜಂತಿನೊಳ್ಬಳೆವುತುಂ
ಶ್ರಮದಿಂದೆ ತಾಯಿ ಬಳಲಲೊಡನೆ ಬಳಲುತುಂ
ದೊಂಡೆಗರುಳಂ ತೊರಳೆಯುಂ ಸುತ್ತೆ ಬಾಡುತುಂ
ಉಂಡಗಳ್ನಿಸ್ಸುರಿಯೆ ನಡನಡನೆ ನಡಗುತುಂ
ಕೀವು ನೆತ್ತರ್ನೆಣಂ ದೊದಹು ಮಿದುಳಂ ಮುತ್ತೆ
ಆವಾವ ಹೇಯಮುಂಟವಱವಱೊಳುಂ ಸುತ್ತೆ

ಇಂತು ನರಕದ ಚೀಲವೆನಿಸಿದುದರದ ನಡುವೆ
ಸಂಶತೊಂಭತ್ತುಮಾಸಂ ಪೇಸಿಕೆಯ ನಡುವೆ
ಕತ್ತಲೆಯ ಕಱುಳೊಳಗೆ ಮರುಳಂದದಿಂ ಬೆಳೆದು
ಒತ್ತರ್ತಲೆಯ ಪುಳುವಿನಂತೆಂತಕ್ಕೆ ಬೆಳಬೆಳದು
ಅಲ್ಲಿ ಕಣ್ಬಲಿಯದಿರೆ ಕುರುಡನಾಗುತೆ ಬಪ್ಪ
ಅಲ್ಲಿ ಕಿವಿ ಬಲಿಯದಿರೆ ಕಿವುಡನಾಗುತೆ ಬಪ್ಪ
ಅಲ್ಲಿ ನಾಲಿಗೆ ಬೀಳೆ ಮೂಗನಾಗುತೆ ಬಂದು
ಅಲ್ಲಿ ಕೈ ಬಲಿಯದಿರೆ ಮುಡುಬನಾಗುತೆ ಬಂದು
ಅಲ್ಲಿ ಕಾಲ್ಬಲಿಯದಿರೆ ಹೆಳವನಾಗುತೆ ಬಂದು
ಅಲ್ಲಿ ತನು ಬಲಿಯದಿರೆ ಮುದುಡೆಯಾಗುತೆ ಬಂದು
ಜೀವಂ ಬಲಿಯದಿರಲು ಬಸುಱಿಳಿಯುತಂ ಬಂದು

ಆವಾವ ಕಂಟಕಂಗಳ ನಡುವೆ ಸಲೆ ಬಂದು
ಬರುತ ಬರುತಡ್ಡವಾಯಿದಡೆ ಸೋವು ನೆಱೆ ಮಿಕ್ಕು
ಉರವಣಿಸುತಲ್ಲಿ ಕತ್ತರಿಕಾಱರೊಳು ಪೊಕ್ಕು
ತೋಳನುಱೆ ಕತ್ತರಿಸಲಲ್ಲಿಯೇ ಮಂಗಳಂ
ಕೀಳುಗೋಣಂ ಕೊಯ್ಯಲಲ್ಲಿಯೇ ಮಂಗಳಂ
ಕೆಳನಡುವಂ ಕೊಱೆಯಲಲ್ಲಿಯೇ ಮಂಗಳಂ
ಬಿಳಿಕಾಲಂ ಕಡಿಯಲಲ್ಲಿಯೇ ಮಂಗಳಂ
ಸರ್ವಾಂಗಮಂ ಕಡಿಯೆ ಮಿಡುಮಿಡನೆ ಮಿಡುಕುತಿರೆ
ದುರ್ವಹಾವಸ್ಥೆಯಿಂ ತಾಯಿ ನೊಂದು ಬಳಲುತಿರೆ

ಎಂದೀಪರಿಯ ಸಾವವಸ್ಥೆಗಳನೊಳಕೊಂಡು
ಚಂದಚಂದದೊಳು ಕೃತಕರ್ಮಮಂ ಕೆಳೆಗೊಂಡು
ತಾಯದೇಹಕ್ಕಲ್ಲಿ ದುಡುದುಡಿಕೆಯಾಗುತಿರೆ
ಬಾಯಳಿವ ತನ್ನಸುಗೆ ಸಂದೇಹಮಾಗುತಿರೆ

ಇಂತು ನಾನಾವಿಧದ ಕಂಟಕಮುಮಂ ಕಳಿದು
ಮುಂತಿರ್ದ ಮೂತ್ರನಾಳದೊಳೆ ಬುಡಿಲೆಂದಿಳಿದು
ಸೂಲಗಿತ್ತಿಯ ಕೆಯ್ಯ ಮೊಱದೊಳ್ಮದುಡಿಬಿದ್ದು
ಮೇಲೆ ಮುಸಕಿರ್ದ ಮಾಂಸಂ ಸುರಿಯೆ ಹೊಲಸೆದ್ದು
ನಡನಡನೆ ನಡುಗೆ ಬೆಚ್ಚಂಬಿಲಮುಮಂ ಪೊಯಿದು
ಮಿಡುಮಿಡನೆ ಮಿಡುಕಿ ಪೊಕ್ಕುಳ ಬಳ್ಳಿಯಂ ಕೊಯಿದು

ಆರಾವುದಂ ಮಾಳ್ಪರಂತದಕ್ಕೊಳಗಾಗಿ
ಬಾರದ ಭವಂ ಬರಿಸಲಂತದಕ್ಕೊಳಗಾಗಿ
ಏಱಾದ ಹುಣ್ಣೊಡಲ ಮೊಲೆಯ ಕೀವಂ ಪೀರ್ದ್ದು
ಮಾಱಾಗಿ ಮಾಯೆಯಿಚ್ಛೆಗೆ ಬೆಚ್ಚುತೊಳಸಾರ್ದ್ದು
ತೊಟ್ಟಿಲೊಳ್ಮಲಮೂತ್ರದೊಂದುಂಡೆಯಾಗುತಂ
ಪಟ್ಟಿರ್ದ್ದ ಮೊಲೆಗೆ ನಾಲಗೆಗೀಳ್ಪುನೋವುತುಂ

ಅಂಬಳಿಕಿ ಉಚ್ಚಿಷ್ಟವಿಳೆಯೆ ನೆಱೆ ಜಾರಿಸುತೆ
ಬೆಂಬಳಿಯೊಳಿಳಿವ ಮೂತ್ರವನಲ್ಲಿ ಜಾರಿಸುತೆ
ಕೆರಕಾಗಿ ಕೆರಕೆರದು ಕಿವಿಯುನೊಳಗೊಂದುತುಂ
ಪರಿದೋಗುವ ಸಿಂಬುಳಿಂ ಶ್ಲೇಷ್ಮದೊಳ್ಮುಳುಗುತುಂ
ಮಲವೆಂದು ತಾನಱಿಯದೆಲ್ಲಮುಂ ತಿನುತಿರ್ದ್ದು
ಪುಳುವೆಂಬುದಂ ಬಗೆಯದೆಲ್ಲಮುಂ ತಿನುತಿರ್ದ್ದು
ನಡುವೆ ಬಾಲಗ್ರಹಂ ಪೊಡೆಯೆ ವಿಕೃತಂ ನೊಂದು
ನಡುವೆ ರೋಗಂಗಳಾದಡೆ ಬೆದಬೆದನೆ ಬೆಂದು
ಇಂತು ಬಾಲ್ಯದ ನರಕದೊಳಗಾಳುತಿರ್ಪ್ಪಲ್ಲಿ
ಸಂತತಂ ಘೋರದೊಳ್ತಿರುಗಿ ಬರುತಿರ್ಪ್ಪಲ್ಲಿ
ನಿನ್ನನಾವಂದದಿಂ ನೆನೆಯಲುಂಟೇ ದೇವ
ನಿನ್ನನೆಂತೆಂದಱಿಯಲುಂಟೇ ಮಹಾದೇವ

ಬಳಿಕ ಯವ್ವನಮಾಗೆ ತಾಯ್ತಂದೆಗಳ್ಕಂಡು
ತಿಳಿದೊಂದು ಮದುವೆಯುಂ ಮಾಡಲ್ಮನಂಗೊಂಡು
ಹಾಳೂರ ಕೋಳಮುಂ ಕೊರಳೊಳಿಕ್ಕುವ ತೆಱದೆ
ಕೇಳ ಹೆಳವಂಗೆ ಸಂಕಲೆಯನಿಕ್ಕುವ ತೆಱದೆ
ಪಶುವಿನ ಕೊರಳೊಳೊಂದು ಪಾಶಮುಂ ಬಿಗಿವಂತೆ
ಮಿಸುಕದಂತಲ್ಲೊಂದು ಏಳೆ ಮರವ ಬಿಗಿವಂತೆ
ದೈತೆಯುಂ ತಂದೊಬ್ಬಳಂ ಮದುವೆಯುಂ ಮಾಡಿ
ಸ್ನೈತಿಕ್ಕಿ ಬಿಡಬಾರದಂತೆ ನೇಹಂಗೂಡಿ
ಆ ಯವ್ವನದ ಗರ್ವ್ವದಿಂ ಧನದ ಗರ್ವ್ವದಿಂ
ತಾಯುಳ್ಳ ಪಿತೃವುಳ್ಳ ರೂಪುಳ್ಳ ಗರ್ವ್ವದಿಂ
ದುರ್ವ್ವಿಕಾರಂ ಮನವನೆತ್ತಿಕ್ಕೆ ಪರಿಪರಿದು
ದುರ್ಬ್ಬೋಧರುಂ ಕೂಡಿಕೊಂಡು ಸುತ್ತುಂ ಸುಳಿದು
ಮದ್ದುಕುಣಿಕೆಯುಕಾಯುನಾವಗಂ ಮೆಲ್ಲುತೆ
ಹೆಡ್ಡತನದಿಂ ಪರಿದು ನಾಯ್ವಾಲನುಂಬಂತೆ

ಒತ್ತರಿಸಿ ಪಿತ್ತವದು ತಲೆಗೇಱಿತೆಂಬಂತೆ
ಒತ್ತಂಬದಿಂ ಗ್ರಹಪಿಕಾರವೆಡೆಗೊಂಡಂತೆ||
ತಲೆಹುಳಿತ ನಾಯಂತೆ ಪುಗದಮನೆಯುಂ ಪೊಕ್ಕು
ಲಲನೆಯರ ನುಣ್ಣನೆಯ ಚೋಹಕ್ಕೆ ಮನಮಿಕ್ಕು
ತಲೆ ಹೇಸಿಕೆಗೆ ತಾಣ ನೆಲೆವನೆಯಿದೆಂದಿರದೆ
ನೆಲೆವೆಚ್ಚಿದಾಶ್ಲೇಷ್ಮ ಕುಲಭಾಂಡವೆಂದಿರದೆ
ಕಿವಿಗುಗ್ಗೆ ಪುಳುಸುರಿವ ವಿವರಂಗಳೆಂದಿಶದೆ
ಭವವಾರಿಧಿಯ ತೊವಲ ಸಿಂಪುಗಳಿವೆಂದಿರದೆ
ಕಣ್ಗಳೆರಡುಂ ನೀರ ಪೊಟ್ಟಣಗಳೆಂದಿರದೆ
ಕಣ್ಗಳೆರಡುಂ ಮುಖದ ಪುಣ್ಗಳೆಂದಱಿದಿರದೆ
ನಾಸಿಕಂ ಸಿಂಬುಳಿನ ಹಿರಿನಾಳವೆಂದಿರದೆ
ಪೇಸಿಕೆಯ ಮುಖದ ಬಚ್ಚಲನಾಳವೆಂದಿರದೆ
ಬಾಯೆಂಬುದೆಲ್ಪಡಸಿ ದೋವರಿಯದೆಂದಿರದೆ
ಕಾಯಕ್ಕೆ ನೆಲೆಯಾವ ಬಗದಳವಿದೆಂದಿರದೆ
ನಳಿತೋಳ್ಗಸ್ತಿಗಳ ದಂಡಂಗಳೆಂದಿರದೆ
ಲಲಿತ ಕಕ್ಷಂ ಬೆಮರಬಿಂದುವೆಂದಱಿದಿರದೆ
ಬಟ್ಟಮೊಲೆಗಳು ಮಾಂಸದೊಟ್ಟಿಲುಗಳೆಂದಿರದೆ
ಹೊಟ್ಟೆಯೆಂಬುದು ಕರುಳ ಮೊಟ್ಟೆ ತಾನೆಂದಿರದೆ
ನಡು ಜುಗುಪ್ಸಾರಸದ ನಟ್ಟನಡುವೆಂದಿರದೆ
ಎಡಬಲದ ಬಡಿಗಳೆಲ್ವಿನ ಕಟ್ಟೆಯೆಂದಿರದೆ
ಪೊಱವಾಱು ಮಲಮೂತ್ರದೊಱತೆ ತಾನೆಂದಿರದೆ
ಎಱಗಿದೆಂ ಪ್ರಾಯದೊಳ್ ಭೀಭತ್ಸವೆಂದಿರದೆ

ಒಂದು ಮೂತ್ರದ ಬಟ್ಟೆಯೊಂದಮೇಧ್ಯದ ಬಟ್ಟೆ
ಒಂದೆರಡೊಳೊಳಗಲ್ಲಿ ಮತ್ತೆ ಕಷ್ಟದ ಬಟ್ಟೆ
ಏನೆಂದಪೇಂ ನೆತ್ತರಿಳಿತಪ್ಪುದದು ಬಟ್ಟೆ
ಸಾನಾಜಲಂಗಳಂ ಪರಿತಪ್ಪುದದು ಬಟ್ಟೆ

ಪುಳುಗಳುಂ ರಸಿಕೆಯುಂ ಸುರಿತಪ್ಪೊರ್ಡದು ಬಟ್ಟೆ
ಕಳಿದಿಂದ್ರಿಯಂ ಕೀವು ಸುಳಿತಪ್ಪೊರ್ಡದು ಬಟ್ಟೆ
ನರರ ನರಕದ ಬಟ್ಟೆಯೆಂದಱಿಯದಾನಿದಂ
ಪರಿಕಿಸದೆ ಕೊಂಡಾಡುತಿರ್ದ್ದೆನಱಿ ಮರುಳಿದಂ
ಪುಳಿತ ಪೆಣನಂ ಕಡಿವುತಿರ್ಪ್ಪ ಪಳೆ ನಾಯಂತೆ
ಕಳಿತ ಮಾಂಸಕ್ಕಳುಪಿ ತಿಂಬ ಬಳ್ಳುವಿನಂತೆ
ಉಚ್ಛಿಷ್ಟದೊಳ್ಪೊಳ್ವ ಹೀಹಂದಿಯಂತಂತೆ
ಅಚ್ಚರಿಯಃ ಪೇಸಿಕೆಯೊಳಗೆ ಮುಳುಗುತಾನಿಂತೆ
ಸವೆದೆನೆಲೆ ಶಂಕರಾ ಶಶಿಧರಾ ಕುರುಣಿಸಾ
ಶಿವನೆ ಸದಾಶಿವನೆ ಕಾಮಾರಿ ಕರುಣಿಸಾ
ಇಂತಪ್ಪ ಹೇಯದೊಳ್ನಿನ್ನಂ ನೆನೆಯಲುಂಟೆ
ಇಂತಪ್ಪ ಘೋರದೊಳಗಿರ್ದ್ದೆನಗೆ ನೀನುಂಟೆ

ಇಂತು ಸತಿಯರ ಚೋಹದೊಳಿಗೆ ಸಿಲುಕಿರುತಿರಲು
ಸಂತತಂ ಯವ್ವನದ ನರಕದೊಳ್ಮುಳುಗಿರಲು
ಚೆನ್ನುಮುಂ ಚರಿತಮುಂ ಕನ್ಯೆಯರಿಗಾಳಾಗಿ
ಹೊನ್ನುಮುಂ ವಿಳಾಸಮುಂ ವಿಷಯಕ್ಕೆ ಹಾಳಾಗಿ
ಸಂಗಮುಂ ಪ್ರಾಣಮುಂ ಹೇಹಕ್ಕೆ ಬಱಿದಾಗಿ
ಅಂಗಂಗಳಧಟೆಲ್ಲನಂಗಂಗೆ ಮಾಱಾಗಿ
ಬಳಿಕ ವನಿತೆಯರಲ್ಲಿ ಕಸವಂ ಬಿಸುಡುವಂತೆ
ಹಳದಾದ ಹರುಣಿಯುಂ ಪೇಸೆ ಪೊಱಮಡಿಪಂತೆ

**ನಡೆವೆಣನೆ ನುಡಿವೆಣನೆ ಬಾಳ್ವೆಣನೆ ಪೋಗೆಂದು**
ಬಡಿಯದಿರು ಬಾಲವಂ ಸುಡುನಾಯಿ ಥೂ ಯೆಂದು
ಇಂತು ಸತಿಯರ್ಬಿಡಲು ಬಡತನಮದಡಿಯಿಡಲು
ಸಂತತಂ ಕೆಳೆಯರ್ಪ್ಪರಿದು ಪೋಗೆ ಮತಿಗೆಡಲು
ತಂದೆತಾಯುಂ ಸತ್ತು ಬಂಧು ಬಳಗಂ ಬಿಟ್ಟು
ಸಂದ ಪುರಜನವಕ್ಕಟಾ ಎನಲ್ಕಣ್ಗೆಟ್ಟು

ಮರುಳಂತೆ ಮರನಂತೆ ಬಱಿಮನೆಗೆ ನಡೆತಂದು
ಎರವಾದಗಂತೆ ಸುಱ್ರನೆ ಸುಯಿದು ಮಿಗೆ ನೊಂದು
ಅಱುವೆಗಪ್ಪಡ ಉಟ್ಟು ಪೆಂಡತಿಯಿರಲ್ಕಂಡು
ಮಱುಗಿ ಮುದವಳಿದು ಪಲತೆಱದೆ ಧಾವತಿಗೊಂಡು
ಜೀವನೋಪಾಯಮಂದಂದಿಂಗೆ ಸಲ್ಲದಿರೆ
ಆವಾವತೆಱದೊಳುಂ ಮನೆವಾರ್ತ್ತೆಗಿಲ್ಲದಿರೆ
ಓಹೋಹೋ ಇಂತಪ್ಪ ಸಮಯದೊಳ್ ಸುತರಾಗೆ
ಆಹಾ ಮಾರಿಯ ಮೇಲೆ ಪಸನಾದ ತೆಱನಾಗೆ
ಮನೆಗೆಯುಂ ಮಕ್ಕಳಿಗೆಯುಂ ಚಿಂತಿಸುತ್ತಿರ್ದ್ದ
ತನೆಗೆಯುಂ ತನ್ನ ಸತಿಯಿಗುಂ ಚಿಂತಿಸುತ್ತಿರ್ದ್ದ
ಸಾಲದಿಂ ಸಿಗ್ಗಾಗಿ ಪಲ ಉಪವಾಸಂ ಪತ್ತಿ
ಬಾಲಕರ್ಬ್ಬಾಲೆಯರ್ಕ್ಕೊಯಿದು ತಿನುತಿರೆ ಮುತ್ತಿ
ಆರಂಭದೊಳ್ ನೋಡಿ ಅಲ್ಲಿಯಾಗದೆ ಮರುಗಿ
ದೂರಿಸುತೆ ಬೆವಹಾರದಿಂದೆ ಕಿಟ್ಟನೆ ತಿಱುಗಿ
ಮೊದಲುಮಂ ಲಾಭಮಂ ಕಾಣದೇ ಬಳಿಸಂದು
ಅದಱಿಂದಲೇನುಮಾಗದೆ ಚಿತ್ತದೊಳುನೊಂದು
ಸೇವಕಾವೃತ್ತಿಯುಂ ಮಾಡಲು ಮನಂದಂದು
ಆವಾವ ದುಸ್ಥಿತಿಗೆ ಲಜ್ಜಿಸದೆ ಮೈಸಂದು

ಪತಿಯಪ್ಪ ನಿನ್ನನಱಿಯದೆ ನರರ್ಗ್ಗಳಾಗಿ
ಮತಿಗೆಟ್ಟು ಧೃತಿಗುಂದಿ ಮರ್ತ್ಯರ್ಗ್ಗೆ ತೊತ್ತಾಗಿ
ನಡುವಿರುಳು ಪೋಗೆನಲು ನಾಲ್ಗಾವುದಂ ಪೋಗಿ
ಎಡಹುತುಂ ತಾಗುತುಂ ಲಘುವಾಗಿ ಮರುಳಾಗಿ
ಅಲ್ಲಿಯುಂ ಪಡೆಯದೇ ಮಱುಗಿ ಕೊಕ್ಕಳ್ಕುದಿದು
ಬಲ್ಲಂತೆ ತಿರಿದು ನೋಡುವೆನೆಂದು ಬಸವಳಿದು
ಎಂಟು ಗೇಣುದ್ದಮಂ ಗೇಣುದ್ದದೊಳ್ ನಿಲಿಸಿ
ಎಂಟುಮುಡಿ ಕಾರ್ಪ್ಪಣ್ಯಮಂ ಮುಖದೊಳಳವಡಿಸಿ

ನಿಂದವರ್ಗ್ಗಳಂ ಬೇಡಿ ನೆರೆದವರ್ಗ್ಗಳಂ ಬೇಡಿ
ಬಂದವರ್ಗ್ಗಳಂ ಬೇಡಿ ಬಲ್ಲವರ್ಗ್ಗಳಂ ಬೇಡಿ
ತಾನುಳಿಯನುಳಿದರೆಲ್ಲರ ನಾವಗುಂ ಬೇಡಿ
ಏನೆಂಬೆನೆಲ್ಲಿಯುಂ ಪಡೆಯದೆ ಮೊಗಂ ಬಾಡಿ
ಕಳವಿನೊಳ್ಬಳಿಸಂದು ತಿರುಗಿ ತಳವೆಳಗಾಗಿ
ಆಳವಳಿವುತಲ್ಲಿಯುಂ ಪಡೆಯದಾತುರನಾಗಿ

ಇಂತುಂ ಮನೆವಾಳ್ತೆಗಂ ಕುದಿವಹರೆಯಲೆ ದೇವ
ಎಂತುವುಂ ನಿನ್ನತ್ತಲೇಳ್ದಱಿಗೆ ನಾಂ ದೇವ
ಎಱಗದಂತಿರುತುಮಿರೆ ಮುಪ್ಪುಬಂದಡಸಲ್ಕೆ
ತೆಱಪಱೆದು ಕಾಯಮಂ ಪರ್ಬ್ಬಲನುವಾಗಲ್ಕೆ
ಆದನೇನನೆಂದಪೆಂ ಪೇಸಿಕೆಯ ಪಸರಮಂ
ಆದನೆಂತು ಬಣ್ಣಿಪೆಂ ದುರ್ಬ್ಬಾವ ವಿಸರಮಂ
ನೆರೆ ನೆಗೆದು ಬೆಳ್ಳರಿಸಿ ತಲೆಗೆ ತಲೆದೋಱುತಿರೆ
ಪರಕಲಿಸಿ ಪಂಜೆಯಿಂ ಪಂಜರಿಸೆ ಮೀಱುತಿರೆ
ತೆರೆ ನೆಗೆಯೆ ಯಮಪುರದ ಸೋಪಾನವೆಂಬಂತೆ
ನರವುಬ್ಬಿ ಮೆಯ್ಯೊಳಗೆ ಬೀಳಲ್ವರಿಯುಲಿಂತಂತೆ
ಬಾಗೆ ಬೆನ್ನೊಳ್ಗೆ ಪಲ್ಲೊಲಗೆ ತಲೆಯುಂ ತೂಗೆ
ಆಗೆ ನರೆ ಮೈಗೆ ಕೇಳ್ದದನಲ್ಲಿ ಕಿವಿನೀಗೆ
ತೋಳು ತೊವಲಂಗಳೆಳ್ದು ನೀಳದಿಂ ಜೋಲುತಿರೆ
ಜಾಳಿಸುತ ಕಾಲುಡಿಗಿ ಕೋಲೂರಿ ನೇಲುತಿರೆ
ಕೆಮ್ಮು ಗುಹೆಗುಟ್ಟಿ ಫಲ್ಲಿಸಿ ಕುಕ್ಕುಱಂಗುಡಿಸಿ
ಕುಮ್ಮಿ ಕುಕ್ಕೆಯೊಳಾಳ್ದು ನೆಱೆ ಮುದಡಿ ಹೊಡಕರಿಸಿ
ಹೂಕರಿಸಲಿಕ್ಕಲಾಱದೆ ಸುವ್ವೋಱೆಯಾಗಿ
ಕೇಕರಿಸಿ ತೆಱಸಂದು ನೆಱೆ ಹಂವುದಂ ಬೋಗಿ
ಕಿವಿಯೊಳಂ ಕಣ್ಣೊಳಂ ಬಾಯೊಳಂ ಘ್ರಾಣದೊಳ್
ತವೆ ಸುರಿವ ಲೋಳೆಯಿಂ ನೊಂದು ನಿತ್ರಾಣದೊಳ್

ನಿಂದಿರಲ್ಕೊಂದಡಿಯನೆತ್ತುತುಂ ಬೀಳುತುಂ
ಬಂದವರ್ಪ್ಪೇಸುತಿರೆ ಪೇಸಿಕೆಯೊಳಾಳುತುಂ
ಒಂದಡಿಯ ನಿಡಲಾಱದುಬ್ಬಸಂಗೊಳ್ಳುತುಂ
ಪಜ್ಜೆ ಪಜ್ಜೆಗೆ ಬೀಳ್ದು ಮುದಡಿ ಮೂಗೂರುತುಂ
ಲಜ್ಜೆ ನಾಚಿಕೆಯುಂಬಿವಂ ಸುಟ್ಟು ಕುಱುಕುತುಂ
ತನಗೆ ಕೆಲಕಡೆಯೊಳುಂಮೞಿಕೆ ಕೊಕ್ಕರಿಸುತಿರೆ
ಮನೆ ಮಕ್ಕಳೆಲ್ಲರುಂ ಮಿಕ್ಕು ಧಿಕ್ಕರಿಸುತಿರೆ
ಬಯಿದೊಡಂ ಕೇಳದೇಡಸಿದೊಡಂ ಕಾಣದಿರೆ
ಎಯಿಗೆ ಸರ್ವ್ವೇಂದ್ರಿಯಂ ಚೇತರಿಸಲಾಱದಿರೆ

ಇಂತು ಮುಪ್ಪಿನ ನರಕದೊಳಗೆ ಕೋಟಲೆಗೊಂಡು
ಎಂತುವು ನಿನ್ನನಱಿಯದೆ ನೆಱೆ ಮರುಳ್ಗೊಂಡು
ಇರ್ದ್ದಲ್ಲಿ ನಿಮ್ಮುಮಂ ನೆನೆಯೆ ತೆಱಪಿಲ್ಲಿಲ್ಲ
ನಿದ್ರೆಯಿಂ ಅರ್ಧಾಯು ತೀರುತ್ತಮಿರಲಲ್ಲಿ
ಸೋಂಕುವ ಖೇಳಾರಿ ಭೂತಂಗಳ್ಗೆ ನಡುಗುತುಂ
ಬೆಂಕಿನೀರ್ಕ್ಕಳ್ಳರಿಂದೆಂತಕ್ಕೆ ಬರ್ದ್ದುಕುತುಂ
ಪಿಡವ ಘಣಿ ತೆರ್ಪ್ಪಣೆಯೊಳೆಂತಕ್ಕೆ ಬರ್ದ್ದುಕುಂತುಂ
ನಡುವೆ ರೋಗಂಗಳಾದೊಡೆ ಸತ್ತು ಹುಟ್ಟುತುಂ
ಇರ್ಪ್ಪಲ್ಲಿ ನಿಮ್ಮುಮಂ ನೆನೆಯಲುಂಟೇ ದೇವ
**ಸರ್ಪ್ಪಭೂಷಣ** ನಿಮ್ಮನಱಿಯಲುಂಟೇ ದೇವ

ನೀನೆತ್ತ ನಾನೆತ್ತ ಸಂಸಾರದಿರವೆತ್ತ
ನೀನೆಂದಡಱಿವ ಶಿವಜ್ಞಾನಕ್ಕೆ ತೆಱಪೆತ್ತ
ಮಾಯೆಯೊಳಗಿರ್ಪ್ಪರಾರ್ ನಿನ್ನನರ್ಚಿರ್ಪ್ಪರಾರ್
ಕಾಯದಿಚ್ಛೆಗೆ ನಡೆದು ನರಕದೊಳ್ಬೀಳ್ವರಾರ್
ಬೇಡದೆತ್ತಣ ಮಾತು ಕರುಣಿಸಾ ಶಂಕರಾ
ನೋಡಿ ಕೈವಿಡಿದು ನಿನ್ನವನೆನಿಸು ಶಶಿಧರಾ

ಆವ ತೆಱದಿಂ ನಿನ್ನ ನೆನೆವ ಪೊತ್ತುಂ ಕಾಣೆ
ನಾವುದುಂ ಗತಿಯಿಲ್ಲ ಪೊರ್ದ್ದಿದೆಂ ನಿನ್ನಾಣೆ
ಕೇಳಯ್ಯ ಸಂಸಾರದಿರವು ಅತಿಭೀಕರಂ
ಕೇಳಾ ಮಹಾದೇವ ಮಾಯೆ ಶೋಷಾಕರಂ

ಇಂತು ಮುಪ್ಪಿನೊಳಿರಲು ಯಮಕಿಂಕರರ್ಬ್ಬರಲ್
ಸಂತತಂ ಯಮನವರ ಭಯದೆ ನಡುಗುತ್ತಿರಲ್
ಮುಪ್ಪು ಮೀಱಿತ್ತಾಯು ತೀರುತ್ತಮಿರಲಲ್ಲಿ
ಒಪ್ಪವಳಿವುತ್ತೆ ಧರಣಿಗೆ ಕೆಡೆದು ಬೀಳ್ವಲ್ಲಿ
ಮೇಲೆ ಪೇರ್ಗ್ಗೂರಿಕ್ಕೆ ನುಡಿವ ನಾಲಗೆ ಬೀಳೆ
ಮೇಲುಸುಸ್ಸಿರ್ದುವಾಗಳ್ಪ್ರಾಣ ಮುಱಿಯಾಳೆ
ನೆಲದೊಳಿಕ್ಕಿದಬಳಿಕ ನೆಂಟರೆಲ್ಲರು ನೆರೆದು
ಕೆಲಬಲದೊಳಿಷ್ಟರುಂ ಬಂಧುವರ್ಗಂ ನೆರೆದು

ಅಕ್ಕಟಾ ಗುಣಿಮಾನಿ ಬುದ್ಧಿವಂತಂ ನೋಡಾ
ಅಕ್ಕಟಾ ಈತಂಗೆ ಸಾವು ಬಂದುದು ನೋಡ
ಎನುತಮಿರುತಿರಲಲ್ಲಿ ಮರಣಶೂಲಗಳೆತ್ತೆ
ತನತನಗೆ ಮಱುಗಿ ಕಣ್ಗಳ್ಕರಗಿ ನುಣ್ಮುತ್ತೆ
ಇರೆ ಕಾಲಕಯ್ಯ ಜೀವಂಗಳುಂ ಪೋಗುತಿರೆ
ಇರೆ ಮೆಲ್ಲಮೆಲ್ಲನೆಲ್ಲಂ ತಣ್ಣಗಾಗುತಿರೆ
ಮೇಲುಸುರ್ಮಿಕ್ಕೇಳೆ ನುಡಿವ ನಾಲಗೆ ಬೀಳೆ
ಕಾಲನವರನುವಾಗೆ ಬಾಯೊಳ್ಸುರಿವ ಲೋಳೆ
ಮೊಗವೊಲ್ಲುಗ್ಗಡಿಸಿ ಗೂರು ಪೆರ್ಗ್ಗೂರಿಡುತ್ತಮಿರೆ
ಬಗೆಗೆಟ್ಟ ಸತಿಪುತ್ರರೊಟ್ಟಿಯೊಱಲುತ್ತಮಿರೆ
ಪೋದನಿಲ್ಲಿಲ್ಲ ಕಿಱಿದುಸುರಿನ್ನುವಿರ್ದ್ದಪುದು
ಪೋದನೆಳ್ಳರೆ ಎನಿತು ವ್ಯವಧಾನಮಿರ್ದ್ದಪುದು
ಎಲೆಲೆಲೇ ಕರ್ಣಮಂತ್ರದ ಪೊತ್ತು ತಪ್ಪಡಿದೆ
ಎಲೆಲೆಲೇ ಸತ್ತಂ ಸತ್ತನೆನುತಮಿರೆ ನೆರವಿಯದು

ಅಲ್ಲಿಯುಂ ಕೆಲಬಲರು ಕ್ರಾಂತಿಯುಂ ಕೊಂಬವರು
ಅಲ್ಲಿ ಭಾಗೆಗೆ ಹೆಣಗಿ ನೆಱೆ ಜಗಳವಾಡುವರು
ಏನನೆಂಬೇ ಸೋಜಿಗದ ಮಾಯೆಯುಂದಮುಂ
ನಾನಾವಿಧದ ಲಜ್ಜೆಗೆಟ್ಟ ಲಘುವೃಂದಮುಂ

ಇಂತಪ್ಪ ಸಮಯದೊಳು ಕಣ್ಮೇಲೆ ಮುರಳುತಿರೆ
ಅಂತಲ್ಲಿ ಜೀವಮಂ ಯಮಧೂತರೆಳವುತಿರೆ
ನಂಟರುಂ ನೋಡುತಿರೆ ನಲ್ಲರುಂ ನೋಡುತಿರೆ
ಬಂಟರುಂ ನೋಡುತಿರೆ ಬಡವರುಂ ನೋಡುತಿರೆ
ಬಲ್ಲಿದರ್ ನೋಡುತಿರೆ ಬಲಯುತರ್ನೋಡುತಿರೆ
ಎಲ್ಲರುಂ ನೋಡುತಿರೆ ಬಲ್ಲವರು ನೋಡುತಿರೆ
ಪುತ್ರರುಂ ಪೆತ್ತರುಂ ಪೆಂಡಿರುಂ ನೋಡುತಿರೆ
ಮಿತ್ರರುಂ ಕೂರ್ತರುಂ ಕೊಲ್ವರುಂ ನೋಡುತಿರೆ
ಅಸುವತ್ತ ಪೋಯಿತ್ತು ಪೆಣನಿತ್ತ ಬಿದ್ದಿತ್ತು
ಬಿಸುಸುಯಿದು ಮಿಗೆ ನೆರವಿ ಬಡಿದಳಲ್ತೊಡಗಿದರು

ಇಂತಾದಬಳಿಕವಾಂ ಮಾಳ್ಪುದಿನ್ನುಂಟೆ
ಇಂತು ಬೞಿದೊಱೆವೋದಬಳಿಕವೆಚ್ಚರವುಂಟೆ
ಬಳಿಕ ದೇವರ್ಗ್ಗುಂಟೆ ಬಳಿಕ ಪಿರಿಯರ್ಗ್ಗುಂಟೆ
ಬಳಿಕ ಪುಣ್ಯಕ್ಕುಂಟೆ ಬಳಿಕ ಧರ್ಮಕ್ಕುಂಟೆ
ಪುಟ್ಟಿದೆಂ ಸತ್ತೆ ನಡುವೆ ಮಡಿದುಗೇನಾಯ್ತು
ಮುಟ್ಟಲೀಕ್ಷಿಸರೊಲ್ಲರೀದೇಹವಿಂತಾಯ್ತು
ನಿಮಿಷವಿರಿಸದೆಕೊಂಡುಪೋಗಿ ಸುಟ್ಟರ್ನೋಡ
ನಿಮಿಷಾರ್ಧದಿಂದಚಿರವೀ ದೇಹಮುಂ ನೋಡ
ಇಂತಪ್ಪ ಭವಮಾಲೆಯೊಳಗೆ ಬಂದೆಂ ದೇವ
ಇಂತಿಂತು ಸತ್ತು ಪುಟ್ಟುತ್ತಲಿರುತಿರ್ದ್ದೆಂ ದೇವ
ಜನಿಯಿಸುವ ಕಷ್ಟವಿದು ಬದುಕುವ ವಿರೋಧವಿದು
ಅನುಗೆಟ್ಟು ಸಾವು ಸಂಕಟದೊಂದವಸ್ಥೆಯಿದು

ದೇವಾ ಇದಕೊಂದು ಗತಿಯುಂಟೆ ಮತಿಯುಂಟೆ
ದೇವಾ ಇದಕೊಂದು ಸುಖವುಂಟೆ ಲೇಸುಂಟೆ
ಅನೇಕ ಸಂಸಾರವೇಕೆ ಕೇಳಲೆ ತಂದೆ
ನೀನು ಎನಗೊಡ್ಡಿದ ಮಹೇಂದ್ರಜಾಲಂ ತಂದೆ
ರಾಜಶೇಖರ ಶರ್ವ ಭವ ಭವಾನೀಧವಾ
ಈ ಜನ್ಮದೊಳಗೆನ್ನ ಕರುಣಿಸಭವಾಭವಾ
ಎಂಭತ್ತುನಾಲ್ಕುಲಕ್ಷದ ಯೋನಿಯಂ ಕಳಿದು
ಶಂಭುವೆ ಎಂತಕ್ಕೆ ಬಂದೆ ನಾನಿದನಱಿದು

ಮತ್ತೆಯುಂ ಕರುಣಿಸುವುದೆನಗೆ ಕರುಣಾಕರಾ
ಮತ್ತೆಯುಂ ಕೃಪೆಮಾಳ್ಪುದೆನಗೆ ಶಶಿಶೇಖರಾ
ಮುಂದುಗೆಟ್ಟೆಂ ಮೂರ್ಖನಾಗಿರ್ದ್ದೆ ನಿನ್ನೆಗಂ
ಇಂದುಧರ ನಿಮ್ಮ ನಱಿಯದೆ ಕೆಟ್ಟೆನಿನ್ನೆಗಂ
ವ್ಯರ್ಥನಾಗುತ್ತಮಿರುತಿರ್ದ್ದೆ ನಾನೆಲೆ ದೇವ
ಸ್ವಾರ್ಥವಿದು ನಿನ್ನ ನೆನೆಯದೆ ಕೆಟ್ಟೆನೆಲೆ ದೇವ
ನಾಡಮಾತಂ ಬಳಸುತಿರೆ ಪೊತ್ತು ಪೋಗುತಿದೆ
ಕೂಡೆ ತೊಳಲುತ್ತಮಿರ್ದ್ದೊಪ್ಪತ್ತು ಪೋಗುತಿದೆ
ಅಂಜುತ್ತ ಅಳಲುತ್ತಮಿರೆ ಪೊಳ್ತು ಪೋಗುತಿದೆ
ರಂಜಿಸುತ ಬೋಧಿಸುತಮಿರೆ ಪೊಳ್ತು ಪೋಗುತಿದೆ
ಕೋಪಿಸುತೆ ಕಾಮಿಸುತಮಿರೆ ಪೊಳ್ತು ಪೋಗುತಿದೆ
ತಾಪಿಸುತೆ ತಲ್ಲಣಿಸುತಿರೆ ಪೊಳ್ತು ಪೋಗುತಿದೆ

ನಿತ್ಯಲಿಂಗಾರ್ಚನೆಯೊಳಿರಿಸೆನ್ನನೆಲೆ ದೇವ
ಸತ್ಯಶರಣರ ನಡುವೆ ಸಲಿಸೆನ್ನನೆಲೆ ದೇವ
ಊರ್ಧ್ವರೇತಂ ವಿರೂಪಾಕ್ಷನೆಂಬುದು ನಿನಗೆ
ಸದ್ಧರ್ಮವಯ್ಯ ಕರುಣಿಪುದು ಕರುಣಿಪುದೆನಗೆ
ಸಿರಿಬಡತನಂಗಳಿಲ್ಲದ ಸದರ್ಥಂ ನೀನೆ
ಹರಿಬೊಮ್ಮರೆಚ್ಚಱದನಾದಿಲಿಂಗಂ ನೀನೆ

ಜನನಮರಣಂಗಳಿಲ್ಲದ ನಿರ್ಮಳಂ ನೀನೆ
ಘನಮಹಿಮನಾನಂದ ನಿತ್ಯತೃಪ್ತಂ ನೀನೆ
ನೀವೆ ಕರುಣಿಪುದಯ್ಯ ಕಾಮದಿಂ ನೋವಂಗೆ
ನೀವೆ ಕರುಣಿಪುದಯ್ಯ ಕೋಪದಿಂ ಬೇವಂಗೆ

ದೇಹವುಳ್ಳಲ್ಲಿ ಕಾಮದೊಳಿಪ್ಪುದರಿದಲ್ಲ
ದೇಹವುಳ್ಳಲ್ಲಿ ಕೋಪದೊಳಿಪ್ಪುದರಿದಲ್ಲ
ಕಾಯವುಳ್ಳಲ್ಲಿ ನಿಃಕಾಮಿಯೆನಿಸುವದರಿದು
ಕಾಯವುಳ್ಳಲ್ಲಿ ನಿರ್ಮಾಯನೆನಿಸುವದರಿದು
ದೇಹವುಳ್ಳಲ್ಲಿ ಸದ್ಗುರುವಂ ಪಡೆವುದರಿದು
ದೇಹವುಳ್ಳಲ್ಲಿ ನಿನ್ನಡಿಯನರ್ಚಿಪುದರಿದು

ಇಂತಿವೆಲ್ಲಂ ನೀನೆ ಕೊಟ್ಟಲ್ಲದಿಲ್ಲಯ್ಯ
ಎಂತಾದೊಡಂ ನಿನ್ನ ಕೃಪೆಯಿಲ್ಲದಿಲ್ಲಯ್ಯ
ನೆನವುತ್ತೆ ನೋಡುತ್ತೆವರ್ಚ್ಚಿಸುತ್ತಿರಿಸಯ್ಯ
ಅನುದಿನಂ ನಿಜಭಕ್ತಿವಿಕಳನಾಗಿರಿಸಯ್ಯ
ತನುವಿಂಗೆ ರೋಗಮಂ ಮಾಡುವುದನಿಷ್ಟವದು
ತನು ಪರಿತ್ಯಾಗದೊಳ್ ಮಱಿಯಿಸೆ ಕನಿಷ್ಟವದು
ದೇಹಮಂ ಬಿಡುವಲ್ಲಿ ನೆನೆಯಿಪುದು ಮಧ್ಯಮಂ
ದೇಹಂ ಬೆರಸಿಕೊಂಡು ಪೋಪುದತ್ಯುತ್ತಮಂ
ಮಧ್ಯವೋತ್ತಮದೊಳುತ್ತಮವನೇ ಮಾಡೆನಗೆ
ಸಾಧ್ಯವಲ್ಲದುದಿಲ್ಲ ನೋಡಿ ಕರುಣಿಪುದೆನಗೆ

ದೇವ ಕರುಣಿಗಳರಸ ದೇವ ಮಾನಿಗಳರಸ
ದೇವ ಭೋಳೆಯುರರಸ ದೇವ ದಾನಿಗಳರಸ
ಪಂಪಾಪುರದ ನಿಧಿಯೆ ಪಂಪಾಪುರದ ಸುಧೆಯೆ
ಪಂಪಾಪುರದ ಗತಿಯೆ ಪಂಪಾಪುರದ ಮತಿಯೆ

ಪಂಪಾಪುರಾಂಬುನಿಧಿವರ್ಧನವಿಮಲಚಂದ್ರ
ಪಂಪಾಪುರಾಬ್ಜ ವಿಕಸನವಿಮಲದಿವಸೇಂದ್ರ
ಕರುಣಿಪುದು ಕರುಣಿಪುದು ಪಂಪಾವಿರೂಪಾಕ್ಷ
ಕರುಣದಿಂದೀಕ್ಷಿಪುದು ಪಂಪಾವಿರೂಪಾಕ್ಷ
ಪ್ರತಿಪಾಲಿಪುದು ಗುರುವೆ ಪಂಪಾವಿರೂಪಾಕ್ಷ
ಶ್ರುತಿಗಗೋಚರನಪ್ಪ ಪಂಪಾವಿರೂಪಾಕ್ಷ
ಜಯ ಜಯ ವಿರೂಪಾಕ್ಷ
ಜಯ ಜಯ ವಿರೂಪಾಕ್ಷ
ಜಯ ಜಯವಿರೂಪಾಕ್ಷ
ಜಯ ಜಯ ನಮಃಸ್ತುತೆ

**ಕಂದ**

ಊಟಂ ನಿದ್ರೆಯು ಮರುಳ್ತನ
ದಾಟಮದಲ್ಲದೆ ಮನಕ್ಕೆ ಮತ್ತೊಂದಿಲ್ಲ
ಕೋಟಲೆಯಂ ಮಾಣಿಸಿ ನೀಂ
ಮಾಟದೊಳಿರಿಸಯ್ಯ ಪಂಪಾವಿರೂಪಾಕ್ಷ

**ಪಿಂಡೋತ್ಪತ್ತಿಯ (ಸಂಸಾರವ್ಯಾಮೋಹ ನಿರಸನ) ರಗಳೆ ಸಮಾಪ್ತಂ**
**ಮಂಗಳ ಮಹಾ ಶ್ರೀ ಶ್ರೀ ಶ್ರೀ**

# ವಿಭೂತಿಯ ರಗಳೆ

## ೮

**ಕಂದ**

ನೀತಿಯು ನೀತಿಯ ಜಗತ್ ಪ್ರ
ಖ್ಯಾತಿಯ ನತನಂ ಹೋರತ್ವದಾ ತಿಯನುದ್ಯತ್
ಜ್ಯೋತಿಯನೆ ಪೊಗಳ್ವೆನೊಲ್ಪುವಿ-
ಭೂತಿಯನೆಲೆ ಶಿವನೆ ಹಂಪೆಯ ವಿರೂಪಾಕ್ಷಾ ॥೧॥

**ಚಂಪಕಮಾಲೆ :**

ಘನಪದವೀವುದಾವುದು ವಿಭೂತಿ ಜಗತ್ಪ್ರಭುವಾಗಿ ಬಾಳ್ವ ಪೆಂ-
ಪಿನ ಪದವೀವುದಾವುದು ವಿಭೂತಿ ಕರಂ ದುರಿತೌಘದಿಂದ ನೊಂ-
ದನನುರೆ ಕಾವುದಾವುದು ವಿಭೂತಿ ಸಮಸ್ತ ಜನಾನಕ್ಕೆ ಮಂ
ಡನತಯ ನೀವುದಾವುದು ವಿಭೂತಿ ವಿಭೂತಿಯೆ ಹಂಪೆಯದೇವನುನ್ನತಂ ॥೨॥

**ಮಹಾಸ್ರಗ್ಧರೆ :**

ಪರಮಜ್ಞಾನ ತ್ರಿಪುಂಡ್ರಂ ಪರಮಗುರುತರಾಯುಷ್ಯಪದಂ ತ್ರಿಪುಂಡ್ರಂ
ಪರಮಾಧಾರಂ ತ್ರಿಪುಂಡ್ರಂ ಪರಮಜನಮನೋರಾಗದರ್ಥಂ ತ್ರಿಪುಂಡ್ರಂ
ಪರಮೈಶ್ವರ್ಯಂ ತ್ರಿಪುಂಡ್ರಂ ಪರಮಸುಖನಿಕಾಯಾಸ್ಪದಂ ತ್ರಿಪುಂಡ್ರಂ
ಹರುಷಂ ಕೈಮಿಗೆ ಪಂಪಾಪುರದರಸ ವಿರೂಪಾಕ್ಷನೊಲ್ಪ ತ್ರಿಪುಂಡ್ರಂ ॥೩॥

**ಉತ್ಸಾಹ ರಗಳೆ**

ಶ್ರೀ ಮದಮರರಾಜ ಹರಿ ವಿರಿಂಚಿಯರ್ಚಿಸುತ್ತಮಿರ್ಪ್ಪ
ಕೋಮಲಾಂಘ್ರಿ ಕಮಲಯುಗ್ಮದಿಂ ವಿರಾಜಿಸುತ್ತಮಿರ್ಪ
ಹಂಪೆಯರಸನೊಲ್ದು ತಾನೆ ಧರಿಸಿಯಿರ್ಪ್ಪ ವರವಿಭೂತಿ
ಇಂಪು ತಂಪು ಸೊಂಪುವಡೆದ ಸಂಪದಪ್ರದಂ ವಿಭೂತಿ

ಭಾಳ ನಯನದಿಂದೆ ಪುಟ್ಟಿ ತುಷ್ಟಿವಡೆದ ವರವಿಭೂತಿ
ಶೂಲಧರನ ಹರನ ವರನ ಪರಮಶಕ್ತಿ ಸಲೆ ವಿಭೂತಿ
ಅಮಮ ರುದ್ರನೀಶ್ವರಂ ಸದಾಶಿವತ್ರಯಂ ತ್ರಿಪುಂಡ್ರ
ಅಮಮ ಪ್ರಣವದೆಕ್ಷರ ಸ್ವರೂಪವಿಡಿದ ಯೀತ್ರಿಪುಂಡ್ರ-
ವಹಹ ನಿಗಮನಿಕರಜನನಜನ್ಮಭೂಮಿ ಯೀ ತ್ರಿಪುಂಡ್ರ
ಅಹಹ ಹುತವಹತ್ರಯ ಪ್ರಭಾವ ಜೀವ ವೀತ್ರಿಪುಂಡ್ರ-
ವೆಲೆಲೆ ಸತ್ವರಜದ ತಮದ ತವರೆನಿಪ್ಪುದೀ ತ್ರಿಪುಂಡ್ರ
ಉಲಿವ ತತ್ತ್ವಮಸಿಯೆನಿಪ್ಪ ವಾಕ್ಯದರ್ಥವೀ ತ್ರಿಪುಂಡ್ರ
ಒಲುಮೆ ಮೆರೆವುತಿರ್ಪ ಘನತರಾತ್ರಯಾತ್ಮಕಂ ತ್ರಿಪುಂಡ್ರ
ಒಲಿದು ವಿಶ್ವತೇಜ ಪ್ರಾಜ್ಞವೆನಿಪ ಜೀವವೀ ತ್ರಿಪುಂಡ್ರ
ಉದ್ಭವಕ್ಕೆ ಶಕ್ತಿರೂಪವೆನಿಪ್ಪುವೊಪ್ಪುವೀ ತ್ರಿಪುಂಡ್ರ
ಅದ್ಭುತಂ ತ್ರಿಕಾಲವಿಸ್ತರಸ್ವರೂಪವೀ ತ್ರಿಪುಂಡ್ರ
ಅರರೆ ಭಾಪು ಘುಳುಘುಳಿಪ್ಪಲೋಚನತ್ರಯಂ ತ್ರಿಪುಂಡ್ರಂ-
ವರರೆ ಸುರನರೋರಗ ತ್ರಿಲೋಕವಂದಿತಂ ತ್ರಿಪುಂಡ್ರ

ಎನ್ನ ಪವಣೆ ಸುರರ ಪವಣೆ ಪರಮನಿಡುವ ಗುರು ವಿಭೂತಿ
ಪನ್ನಗಪ್ರಧಾನರಳವೆ ಉನ್ನತೋನ್ನತಂ ವಿಭೂತಿ
ಭಕ್ತಕುಲದ ಭಾಳತಳದ ಬೆಳೆಪ ತಿಲಕವೀ ವಿಭೂತಿ
ಮುಕ್ತಿಫಲದ ಬೆಳ್ಪುದಳೆದ ರಸದ ಲಹರಿ ಯೀ ವಿಭೂತಿ
ಶರಣಜನದ ನಿಜದ ಭುಜದ ವಿಜಯಪಟ್ಟವೀ ವಿಭೂತಿ
ಶರಣತತಿಯ ಗತಿಯ ಮತಿಯ ನುತವಿಳಾಸವೀ ವಿಭೂತಿ
ಒಳಗಣಘವನೊಣಗಿಸಿರ್ಪ ವಾಯು ಬೀಜವೀ ವಿಭೂತಿ
ಬೆಳಗುತದನೆ ಸುಟ್ಟು ಕಳೆವ ವಹ್ನಿಬೀಜವೀ ವಿಭೂತಿ
ಅಂತರಂಗ ಮಲವನಲೆದು ತೊಳೆವ ಸಲಿಲವೀ ವಿಭೂತಿ
ಕಂತುಹರನನಲ್ಲಿ ನಿಲಿಸಿ ನೆಲಿಸುವಮೃತವೀ ವಿಭೂತಿ

ಶಿರದೊಳಿಟ್ಟ ಭಸಿತದೊಳ್ ಸದಾಶಿವಂ ಸರಾಗದಲ್ಲಿ
ಸರಿಯುದಿರ್ಪನಾವನಿಡುವನವನ ನೊಲಿವನೀಶನಲ್ಲಿ

ನೊಸಲೊಳಿಟ್ಟ ಭಸಿತದಿಂದ ಭಾಳನಯನನಿಪ್ಪನಲ್ಲಿ
ಎಸೆವ ಭುಜದ ಭೂತಿಯಿಂದೆ ಶೂಲಹಸ್ತ ನಿಪ್ಪನಲ್ಲಿ
ಕೊರಲೊಳಿಟ್ಟ ಭಸಿತದಿಂದೆ ಗರಳಕಂಠನಿಪ್ಪನಲ್ಲಿ
ಉರದೊಳಿಡಲುಮಾಮಹೇಶನೊಲ್ದು ನೆಲಸಿನಿಲ್ವನಲ್ಲಿ
ಕರದೊಳಿಟ್ಟೊಡಭಯಕರನನಾಥನಾಥನಿಪ್ಪನಱಿದು
ವರಗಭೀರ ನಾಭಿಯಲ್ಲಿ ಗಗನಕೇಶನಿಪ್ಪನೊಲಿದು
ಸರ್ವದೇಹದಲ್ಲಿ ಧರಿಸಿಯಿರ್ಪ್ಪ ಶರಣನಿರುವನಮಮ
ಶರ್ವನೊರ್ವನಱಿವನುರ್ವಿಯೊಳಗೆ ಬಲ್ಲನಾವನಮಮ
ಪುಣ್ಯಮಾರ್ಗಮುಚಿತವರ್ಗಮಚಲದುರ್ಗಮೀ ವಿಭೂತಿ
ಗಣ್ಯರಹಿತ ವಿಶ್ವಸಹಿತಮಧಿಕವಿಹಿತವೀ ವಿಭೂತಿ
ಬಾಲಕರ್ಗ್ಗೆ ಭಯವಿದರ್ಗ್ಗೆ ಭೂತಸಮಿತಿ ಸೋಂಕಿದರ್ಗ್ಗೆ
ಬಾಣತಿಗೆ ರುಜಾಧಿಕರ್ಗ್ಗೆ ಉಗ್ರಭೂತವಿಡಿದವರ್ಗ್ಗೆ
ಸಂಚಿಸಿರ್ದ ಪೂರ್ವಜನ್ಮ ದುಷ್ಕೃತಂಗಳಡಸಿದರ್ಗ್ಗೆ
ಪಂಚಪಾತಕಂಗಳೊಳ್ ಪೊರಳ್ವಪಾರಪಾತಕರ್ಗ್ಗೆ

ಇದೇ ಮತಂ ನುತಂ ಹಿತಂ ವ್ರತಂ ಶ್ರುತಂ ಪಥಂ ವಿಭೂತಿ
ಸದಮಲಸ್ಥಲಂ ಕುಲಂ ಛಲಂ ಬಲಂ ಫಲಂ ವಿಭೂತಿ
ಶಿಕ್ಷೆಗಾದಿ ದೀಕ್ಷೆಗಾದಿ ಮೋಕ್ಷದಾದಿಯೀ ವಿಭೂತಿ
ಅಕ್ಷರಂ ಸುಲಕ್ಷಣಂ ಶಿಕ್ಷಣೇಕ್ಷಣಂ ಘನಂ ವಿಭೂತಿ
ಪಟ್ಟಭದ್ರರೆನಿಪ ನೃಪತಿ ಕುಲಕೆ ತಿಲಕವೀ ವಿಭೂತಿ
ನಿಷ್ಠೆ ಮಿಗೆ ಸುವಾಸಿನೀಜನಕ್ಕೆ ಮಂಗಳಪ್ರದಂ ವಿಭೂತಿ
ದೇವಸಭೆಗೆ ಬ್ರಹ್ಮಸಭೆಗೆ ರಾಜಸಭೆಗೆ ಯೋಗ್ಯಮಿದುವೆ
ದೇವರಾಜರಾಜನಮರಪೂಜ್ಯನೊಲ್ವ ಭಾಗ್ಯಮಿದುವೆ

ಗಜಮುಖಂಗೆ ಷಣ್ಮುಖಂಗೆ ಗಿರಿಜೆ ಭರದೊಳಿಡುವ ರಕ್ಷೆ
ವಿಜಯರೆನಿಪ ಗಣಕುಲಕ್ಕೆ ಬಾಳನಯನನಿಡುವ ರಕ್ಷೆ
ವಿಷವನಂದು ಧರಿಯಿಪಲ್ಲಿ ಪರಮನಿಟ್ಟುಕೊಂಡ ರಕ್ಷೆ
ಅಸಮಪುರಪನುರುಪುವಲ್ಲಿ ಕಾಲವೈರಿ ತಳೆದ ರಕ್ಷೆ

ಮುನಿಗಳಚಲ ಮನುಗಳಷ್ಟವಸುಗಳಿಡುವ ಘನವಿಭೂತಿ
ಮನದೊಳನುದಿನಂ ಮುಖಾರಿ ನೆನೆದು ನಲಿವ ನೆಲೆ ವಿಭೂತಿ
ಮುಖವನುರುಪುವಲ್ಲಿ ವೀರಭದ್ರನಿಟ್ಟುಕೊಂಡುದೀ ವಿಭೂತಿ
ಅಖಿಳಜನದ ಮನವ ಘನದ ಬೆಳಗಿತೊಳಗುತಿರ್ಪುದೀ ವಿಭೂತಿ
ಶರಭರೂಪಿನಲ್ಲಿ ವೀರನಿಟ್ಟು ಕೊಂಡು ನಿಷ್ಠೆವಡೆದ ಭೂತಿ
ಪರಮನಂದು ಪಂಚಶರನನುರಪಿ ಕಳೆದು ತಳೆದ ಭೂತಿ

ಇಟ್ಟುಕೊಂಡ ಶರಣ ಜನದ ತನುವನೊಪ್ಪವಿಡುವ ಭೂತಿ
ಇಟ್ಟ ಭಕ್ತ ಸುಕೃತಫಲವನೆಯ್ದೆ ಬಣ್ಣವಿಡುವ ಭೂತಿ
ಶಶಿಯ ಬೆಳಗನೀಳ್ದುಕೊಂಡು ರವಿಯ ರುಚಿಯನಾಳಿಗೊಂಡು
ಮಿಸುಪ ಮಿಂಚಿನೊಳಗೆ ಪೊಳೆವ ಬಣ್ಣಮಂ ಕಳಲ್ಚಿಕೊಂಡು
ಚಿತ್ಪ್ರಕಾಶರಾಶಿಯೆನಿಪ್ಪುದಭವನಿಡುವ ವರವಿಭೂತಿ
ಸುಪ್ರಬುದ್ಧ ಸತ್ಯಶರಣ ಸತ್ಪಥಪ್ರದಂ ವಿಭೂತಿ
ರಜತಗಿರಿ ಸುಧಾಪಯೋಧಿಗಳ್ಗೆ ಬಣ್ಣವಿಡುವ ಭೂತಿ
ನಿಜದ ಬೆಳಗಿನೊರೆಗೆ ದೊರೆಗೆ ಬರ್ಪ್ಪ ಬಣ್ಣವೀ ವಿಭೂತಿ
ಸಿಂಗರಕ್ಕೆ ಸಿಂಗರಂ ಚಿರಂ ಕರಂ ವರಂ ವಿಭೂತಿ
ಮಂಗಳಕ್ಕೆ ಮುಖ್ಯ ಮಂಗಳಪ್ರಭೂತವೀ ವಿಭೂತಿ

ನೊಸಲ ಕಣ್ಣ ಹಸೆಯೊಳಿರ್ಪುದಸಮನಯನವಿಡುವ ಭೂತಿ
ಎಸೆವ ಹರನ ಹರಣ ಕಿರಣ ನಿಸರವೆನಿಪ್ಪುದೀ ವಿಭೂತಿ
ಧರೆ ಜಲಾಗ್ನಿ ವಾಯು ಗಗನ ವಿಂಧ್ವಿನಾತ್ಮತತಿ ವಿಭೂತಿ
ಪರಮತತ್ತ್ವಸಾರ ಶೈವಸುರಭಿ ನೋಡಿದೀ ವಿಭೂತಿ
ನೋಡೆ ಪಾಪಹರನನೊಲ್ದು ಮುಟ್ಟೆ ಪುಣ್ಯತತಿಯ ಬೆಳೆಸು
ಬೇಡಿ ಹೊಗಳೆ ಭುಕ್ತಿ ಮುಕ್ತಿಯೀವುದೀ ವಿಭೂತಿಗೆಳಸು
ಇಡೆ ಜಟಾಧರಂ ತ್ರಿನೇತ್ರಮಿಂದು ಕಳೆಯನೀವುದಲ್ಲಿ
ಮೃಡನರೂಪನಿತ್ತು ನಿತ್ಯಪದದ ತುದಿಯೊಳಿರ್ಪ್ಪದಲ್ಲಿ
ಧರ್ಮದರ್ಥ ಕಾಮ ಮೋಕ್ಷದುತ್ತಮಪ್ರದಂ ವಿಭೂತಿ
ನಿರ್ಮಲಂ ನಿರಂಜನಂ ನಿರಾಮಯಂ ಜಯಂ ವಿಭೂತಿ

ಪಾಪಹರಣವಮೃತಕಿರಣ ಇಂದುಕಿರಣವೀ ವಿಭೂತಿ
ಭಾಪು ಶರಣರೊಲ್ವ ಹರಣದನಘಚರಣವೀ ವಿಭೂತಿ
ಸುಖಕರಂ ಚಿರಂ ವರಂ ಕರಂ ನಿರಂತರಂ ವಿಭೂತಿ
ನಿಖಿಲ ಭೋಗವಖಿಲಯಾಗವತುಳಯೋಗವೀ ವಿಭೂತಿ
ಸುಕೃತಕಾರಿ ಕಾಮ ವೈರಿಯರ್ಧನಾರಿಯೀ ವಿಭೂತಿ
ಸಕಲಶಕ್ತಿ ಭಕ್ತಿ ಯುಕ್ತಿ ಭುಕ್ತಿ ಮುಕ್ತಿಯೀ ವಿಭೂತಿ
ಧರಿಸಿಯಿಪ್ಪವರ್ಗ್ಗೆ ವರಮುಖಂ ಸಖಂ ಸುಖಂ ವಿಭೂತಿ
ಶರಣತತಿಗೆ ಯವ್ವನಂ ಘನಂ ಧನಂ ಮನಂ ವಿಭೂತಿ
ಸಿರಿಗೆ ಸಿರಿ ಗುಣಕ್ಕೆ ಗುಣವನಾದಿಗಾದಿ ಯೀ ವಿಭೂತಿ
ಧರೆಗೆ ಧರೆ ಜಲಕ್ಕೆ ಜಲವಿನಂಗಿನಂ ಘನಂ ವಿಭೂತಿ
ಹುತವಹಂಗೆ ಹುತವಹಂ ನಭಕ್ಕೆನಭವೆನಿಪ್ಪ ವಿಭೂತಿ
ಅತುಳವಾಯುವಿಂಗೆ ವಾಯುಗಿಂದುವಿಂದು ಯೀ ವಿಭೂತಿ
ಚೇತನಕ್ಕೆ ಚೇತನಂ ಪುರಾತನಂ ಪ್ರಸಿದ್ಧ ಭೂತಿ
ಭೂತಹಿತವಜಾತಮಧವನಾಥರತಿಹಿತಂ ವಿಭೂತಿ
ನತಜನಕ್ಕೆ ಸತ್ಕುಲಂ ಛಲಂ ನೆಲಂ ಬಲಂ ವಿಭೂತಿ
ಅತಿಶಯಂ ನಯಂ ಜಯಂ ವಯಂ ಪ್ರಿಯಂ ಸಯಂ ವಿಭೂತಿ

ಹಂಪೆಯರಸ ನೊಲ್ವಭೂತಿ ಇಂಪು ಸೊಂಪನೀವ ಭೂತಿ
ಹಂಪೆಯರಸನಿಂಪುಸರಸವಾಹಭೂತಿ ದೇಹ ನೀತಿ
ವಿಮಲವಧಿಕ ನಿಧಿ ವಿಭೂತಿ ಅಮರಕುಲದ ಸುಧೆ ವಿಭೂತಿ
ಸತ್ಯಕುಲದತುದಿ ವಿಭೂತಿ ನಿತ್ಯಪದದ ಸುಧೆ ವಿಭೂತಿ
ಸಕಲ ಮುನಿಗಳನುವಿಭೂತಿ ಸುಕರ ಸುಖದ ತನು ವಿಭೂತಿ
ಶಿವನಕಾಹು ಭವನ ರೂಹು ವರದ ಸೀವು ಪರಮಲೀಲೆ
ಶಿವನ ಜಾತಿ ಭವನ ಭೀತಿ ಶ್ರುತಿ ವಿಭೂತಿ ಮತಿ ವಿಭೂತಿ
ಶರಣರಾಗು ಹರನಲಾಗು ಮಚ್ಚಿನಿಂಬು ನೆಚ್ಚಿನಂಬು
ಧರಿಯಿಸಣ್ಣ ಹರನ ಬಣ್ಣಯುಲೆಲೆಸಿದ್ಧ ವೊಲಿಸುಬದ್ದ
ಗತಿ ವಿಭೂತಿ ರತಿ ವಿಭೂತಿ ಸಿರಿ ವಿಭೂತಿ ಗುರು ವಿಭೂತಿ

ಜಯಜಯ ಪ್ರಕಾಶಮಯಗೆ ಜಯಜಯ ಪ್ರಕಾಶ ಭಯಗೆ
ಜಯಜಯಮಲ ಜಯತು ಜಯತು ಹಂಪೆಯರಸ
ಭಸಿತರೂಪನಾದ ಜಯತು ಜಯತು ಪುಣ್ಯಪುರುಷ ೧೦೮
ಹಂಪೆಯರಸ ನಿನಗೆ ಜಯ ಜಯ ನಮಸ್ತೇ ನಮಃ ।।

**ಚಂಪಕಮಾಲೆ :**

ಚೆಲುವ ವಿಭೂತಿ ಶಾಂತತ ವಿಭೂತಿ ಸುನೀತಿ ವಿಭೂತಿ ಸರ್ವರೊಳ್
ಸಲುವವಿಭೂತಿ ಸೌಖ್ಯತೆ ವಿಭೂತಿ ಶಿವಾಗಮ ವೀಥಿ ಗಗ್ಗಳಂ
ನಿಲುವುದು ಭೂತಿ ಸದ್ಗತಿ ವಿಭೂತಿ ಸದರ್ಥ ವಿಭೂತಿ ಕರ್ಮವಂ
ಗೆಲ್ವ ವಿಭೂತಿ ಹಂಪೆಯರಸಂಗೆ ಸುಖಪರಮಾರ್ಥಭೂಷಣಂ ॥೧॥

**ಕಂದ**

ರಾಶಿಗೆ ಲಕ್ಷಣಂವಿನಿಸಿರ
ಲೋಸರಿಸದೆ ಭೂತನಾಥಲೆತ್ತರದೈವ
ಕ್ಕಾಸೆಗೊಡದಿರ್ಪ್ಪ ಬಲ್ಪಿನ
ಲೇಸೆನಿಸಿತು ಪ್ರಮಥರೆಸೆವನೊಸಲ ತ್ರಿಪುಡ್ರಂ ॥೨॥

**ವಿಭೂತಿಯ ರಗಳೆ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ಶ್ರೀ**

# ರುದ್ರಾಕ್ಷಿಯ ರಗಳೆ

## ೯

**ಸ್ರಗ್ಧರೆ :**

ಪುಣ್ಯಂ ರುದ್ರಾಕ್ಷಿ ಸರ್ಪಾಭರಣನ ಘನಸಂಪತ್ತೀ ರುದ್ರಾಕ್ಷಿ ಭಾವಾ
ಗಣ್ಯಂ ರುದ್ರಾಕ್ಷಿ ಶೈವಾಗಮಮುಖಃ ಕಾಯಂ ರುದ್ರಾಕ್ಷಿ ಸಲ್ಲಾ
ವಣ್ಯಂ ರುದ್ರಾಕ್ಷಿ ಸರ್ವೇಶನ ನಿಜವದನಶ್ರೇಣಿ ರುದ್ರಾಕ್ಷಿ ಸತ್ಕಾ-
ರುಣ್ಯಂ ರುದ್ರಾಕ್ಷಿ ಪಂಪಾಪುರವರನ ವಿರೂಪಾಕ್ಷನಕ್ಷಿ ಪ್ರಭಾವಂ ||

**ಲಲಿತ ರಗಳೆ :**

ಶ್ರೀಸಕಳಸುರಮಕುಟಮಂಡಿತಪದದ್ವಯನ
ಭಾಸುರ ವಿಳಾಸಯೂಥನ ಶರಣಸನ್ನಿಭನ
ಗೌರೀಮುಖಾಂಭೋಜವಿಕಸನ ದಿವಾಕರನ
ನಾರಾಯಣಾದಿ ದೇವವ್ರಜ ಸುಧಾಕರನ
ತರಣಿಕುಲಕಿರಣತತಿ ಗುರುತರವರಪ್ರಭನ
ಶರಣರಂತಃಕರಣ ನಿಖಿಳಸುಖಸನ್ನಿಭನ
ಕಮಳಸಖ ಕುಮುದಸಖ ಪವನಸುಖ ಲೋಚನನ
ನಮಿತಜನಕಾಯ ಮಾಯಾಪಾಶಮೋಚನನ
ಹಂಪೆಯರಸನ ಲೋಚನೋದ್ಭವಂ ರುದ್ರಾಕ್ಷಿ
ಹಂಪೆಯರಸನ ಮಿಸುಪಕಣ್ಣಮಣಿ ರುದ್ರಾಕ್ಷಿ ೧೦

ಒಂದು ಮುಖವೆಂಬುದೇಕೋರುದ್ರನುರುತರಂ
ಸಂದೆರಡು ಮುಖವೊಪ್ಪುವರ್ಧನಾರೀಶ್ವರಂ
ಮೂಱುಮುಖ ರುದ್ರಾಕ್ಷಿಯೀಶ್ವರ ಸದಾಶಿವಂ

ಮೀಱಿ ನಾಲ್ಕೆಂಬುದೇ ಚತುರಯುಗವಂತದಂ
ಪಂಚಮುಖವಾ ಪಂಚವದನನೇ ಬೇಱಿಲ್ಲ
ಸಂಚಿಸಿದ ಷಣ್ಮುಖಂ ಷಣ್ಮುಖಂ ಮತ್ತಿಲ್ಲ
ಸಪ್ತ ಮುಖವಾ ಸಪ್ತಮಾತೃಕೆಯರೇ ದಿಟಂ
ಸಪ್ತಾಧಿಕಾನನವದಷ್ಟಮೂರ್ತಿ ಸ್ಫುಟಂ
ನವಮುಖಂಗಳು ನವಗ್ರಹದ ಜನ್ಮಸ್ಥಳಂ
ಪವಣುಂಟೆ ದಶಮುಖಂ ದಶಭುಜಮಹೋಜ್ವಳಂ
ಹನ್ನೊಂದು ಮುಖವಮುವು ಹನ್ನೊಂದು ರುದ್ರರೇ
ಪನ್ನೆರಡು ವದನಮುಂ ದ್ವಾದಶಾದಿತ್ಯರೇ
ಹದಿಮೂರು ಮುಖವರರೆ ಕಾಮುದಂ ಶಾಶ್ವತಂ
ಪದಿನಾಲ್ಕು ಮುಖವೆಂಬುದಾ ಮನುಗಳೂರ್ಜಿತಂ
ಎಣಿಸಲೆನ್ನಳವೆ ಘನಘನಮುಖಂ ರುದ್ರಾಕ್ಷಿ
ತ್ರಿಣಯನಂ ರಂಜಿಸುವ ಭೂಷಣಂ ರುದ್ರಾಕ್ಷಿ

ಉರ ಶಿಖಾಮಣಿಗೆ ಶಶಿಜೂಟನೊಪ್ಪುವಂ
ವರಶಿರೋಮಾಲೆಗೆ ಶಿರೋಮಾಲೆಯೊಪ್ಪುವಂ
ಅಕ್ಷ ಮಾಲೆಯೊಳಿಕ್ಷುಚಾಪಹರನೊಪ್ಪುವಂ
ಉಕ್ಷವಾಹನನುರದ ಹಾರದೊಳಗೊಪ್ಪುವಂ
ಕುಂಡಲಕ್ಕುರಗಕುಂಡಲನೊಲಿದು ಹಿಗ್ಗುವಂ
ತಂಡದಿಂ ಕಂಠಮಾಲೆಗೆ ಗಿರಿಶನೊಗ್ಗುವಂ
ಬಾಹು ಬಳೆಯಲ್ಲಿಯಾಹಹ ಶೂಲಿಯೊಪ್ಪುವಂ
ಶ್ರೀಹಸ್ತಕಟಕದೊಳಗಭಯಕರನೊಪ್ಪುವಂ
ಸರ್ವಾಂಗದೊಳು ಸರ್ವದೇವಮಯನೊಪ್ಪುವಂ
ಪರ್ವಿಪಲ್ಲವಿಸಿ ತಳೆದಲ್ಲಿ ಹರನೊಪ್ಪುವಂ
ಅದುಕಾರಣಂ ಶರೀರದೊಳೆಲ್ಲ ಧರಿಯಿಪುದು
ಸದಮಳನ ನಹಿಧರನನಭವನಂ ಸ್ಮರಿಯಿಪುದು

ಹರನ ಕಂಗಳ ಕಾಂತಿಯುನ್ನತಂ ರುದ್ರಾಕ್ಷಿ
ಪುರಹರನ ಸರ್ವತೋಮುಖವೆಸೆವ ರುದ್ರಾಕ್ಷಿ

ಕಣ್ಣಿಂದೆ ಬಂದವೆಂದೆಂಬ ಸಾಣ್ಣುಡಿ ದಿಟಂ
ಬಣ್ಣಿಸಲ್ಕಳವಲ್ಲ ಸಾಮರ್ಥ್ಯದುತ್ಕಟಂ

ಬೆಳೆದಿಳಿವ ರುದ್ರನಾನಂದಾಶ್ರು ರುದ್ರಾಕ್ಷಿ
ಕಳೆಯನಾದಂ ಬಿಂದುವಿನ ಸೊಂಪು ರುದ್ರಾಕ್ಷಿ
ಶರ್ವನ ಶಿಖಾಮಣಿ ಶಿರೋಮಾಲೆ ರುದ್ರಾಕ್ಷಿ
ಪಾರ್ವತಿಯ ಹಸ್ತಕಟಕಂ ಮೆಱೆವ ರುದ್ರಾಕ್ಷಿ
**ಅನುಪಮ ಶಿವಪದಕದೊಳೆ ಮುಖ್ಯಮಣಿ ರುದ್ರಾಕ್ಷಿ**
**ಉಮೆಯೈದೆದಾಳಿಯೊಳೆ ನಾಯಕಂ ರುದ್ರಾಕ್ಷಿ**
ಮಂತ್ರಬೀಜಂ ತಂತ್ರಫಲಸಮಿತಿ ರುದ್ರಾಕ್ಷಿ
ಮಂತ್ರತಂತ್ರಂಗಳಾಭರಣ ವೀ ರುದ್ರಾಕ್ಷಿ
ಪಂಚವದನನ ನೇತ್ರಫಲಸಮಿತಿ ರುದ್ರಾಕ್ಷಿ
ಪಂಚಾಕ್ಷರೀಕಲ್ಪಕುಜಫಲಂ ರುದ್ರಾಕ್ಷಿ-
ವರರೆ ಮುಕ್ತಿದ್ವಾರದೊಳಗಾದ ರುದ್ರಾಕ್ಷಿ
ಪರತತ್ತ್ವಗುಣದೊಡನೆ ಸೇರಿಸುವ ರುದ್ರಾಕ್ಷಿ
ಶಿವಮಂತ್ರಭೂಮೀಸ್ವಯಂಭುವೀ ರುದ್ರಾಕ್ಷಿ
ಶಿವನ ಪಂಚಾನನದ ಸಂಚವೀ ರುದ್ರಾಕ್ಷಿ
ಶರಣಸಂಕುಳವಜ್ರಪಂಜರಂ ರುದ್ರಾಕ್ಷಿ
ಧರಣೀತಳಕ್ಕೆ ಪಾವನಕರಂ ರುದ್ರಾಕ್ಷಿ
ವರಮುಖಂ ಸುಖಮುಖಂ ಶ್ರೀಮುಖಂ ರುದ್ರಾಕ್ಷಿ
ಹರಮುಖಂ ಪರಮುಖಂ ಸ್ಥಿರಮುಖಂ ರುದ್ರಾಕ್ಷಿ
ಸಕಲ ಸುಕೃತಾಂಕುರದ ಬಿತ್ತುಗಳು ರುದ್ರಾಕ್ಷಿ
ನಿಖಿಲಫಲತತಿಗಳ್ಗೆ ತೆತ್ತುಗಳು ರುದ್ರಾಕ್ಷಿ
ಪರಮಹಂಸಾನಂದ ಕುಂಜವೀ ರುದ್ರಾಕ್ಷಿ
ಪರಮಯೋಗಾನಂದ ಪುಂಜವೀ ರುದ್ರಾಕ್ಷಿ

ಎಣಿಯಿಸಲ್ಕಳವಲ್ಲ ಗುಣಿಯಿಸಲ್ಕದು ಮತಂ
ಎಣಿಸಲೆನ್ನಳವೆ ತ್ರಿಣಯನ ಭೂಷಾಂಕಿತಂ

ದುಷ್ಕರ್ಮವಂ ಕೊಱೆವ ಕೇಶರದ ರಾಶಿಗಳು
ನಿಷ್ಕಾಮಿಗಳ್ಗೆಳೆವ ಸತ್ಫಲದ ರಾಶಿಗಳು
ಸುಗತಿಯನುಗುಳ್ವ ಪುಣ್ಯದ ಚಿನ್ನಘಟ್ಟಿಗಳು
ಸೊಗಯಿಸುವ ಪುಣ್ಯಂ ಕವಿದ ಜೇನಹುಟ್ಟುಗಳು

ಸತ್ಯದಡಕಿಲು ನಿತ್ಯದುಂಡೆಗಳು ರುದ್ರಾಕ್ಷಿ
ಅತ್ಯನುಪಮಾನಂದದಿಂಡೆಗಳು ರುದ್ರಾಕ್ಷಿ
ಕಾಲವೈರಿಯ ಜಪದ ಮಾಲೆಗಳು ರುದ್ರಾಕ್ಷಿ
ಭಾಳನೇತ್ರನ ನಯನ ಲೀಲೆಗಳು ರುದ್ರಾಕ್ಷಿ
ಸಕಲ ಘನಸಾಮರ್ಥ್ಯಸಾಲೆಗಳು ರುದ್ರಾಕ್ಷಿ
ಸುಕರವೆನಿಸುವ ಸುಖದ ಲೀಲೆಗಳು ರುದ್ರಾಕ್ಷಿ
ವರಶಕ್ರರೇಖಾವಿಳಾಸಿಗಳು ರುದ್ರಾಕ್ಷಿ
ಹರನವೇಷದ ಕಲ್ಪಶಾಖೆಗಳು ರುದ್ರಾಕ್ಷಿ

ಶಿವನ ಸದ್ಭಕ್ತಿಚೂಡಾಮಣಿಗಳಮ್ಮಮ್ಮ
ಭವನ ಸದ್ಭಕ್ತರ ಶಿರೋಮಣಿಗಳಮ್ಮಮ್ಮ
ನೆನೆದುದಂ ಕುಡುವ ಚಿಂತಾಮಣಿಗಳವನಿಯೊಳು
ನೆನೆಯೆ ರಕ್ಷಿಸುವ ರಕ್ಷಾಮಣಿಗಳವನಿಯೊಳು
ಭುವನಮಂ ಬೆಳಗುವದ್ಯುಮಣಿಗಳು ರುದ್ರಾಕ್ಷಿ
ಭವಮನೋಹರ ಮಹಾಮಣಿಗಳೀ ರುದ್ರಾಕ್ಷಿ
ಗಂಗೆ ನರ್ಮದೆ ತುಂಗಭದ್ರೆ ಗೋದಾವರಿಯು
ಹಂಗೇಕೆ ಯಮುನೆಯ ಸರಸ್ವತಿಯ ಮಲಹರಿಯು
ಮುಟ್ಟು ತೊಡಕಟ್ಟು ಸೂಡೊಲಿದು ರುದ್ರಾಕ್ಷಿಯಂ
ಬಿಟ್ಟುಕಳೆ ಮಿಕ್ಕಿನಾಭರಣಕುಳ ಕಾಂಕ್ಷೆಯಂ

ಹರಭಕ್ತಿಭೂಷಣಂ ಪೋಷಣಂ ರುದ್ರಾಕ್ಷಿ
ದುರಿತಕುಲ ಶೋಷಣಂ ಭೀಷಣಂ ರುದ್ರಾಕ್ಷಿ

ಶುಭನಿಳಯಮದೋರಣಂ ತೋರಣಂ ರುದ್ರಾಕ್ಷಿ
ಅಭವನಿಳಯುದ ತೋರಣೋರಣು ರುದ್ರಾಕ್ಷಿ
ವಿಭವತತಿ ಕಾರಣಂ ಧಾರಣಂ ರುದ್ರಾಕ್ಷಿ
ಅಭವಾಂಘ್ರಿ ಭಕ್ತಿವಿಸ್ತಾರಣಂ ರುದ್ರಾಕ್ಷಿ

ಜಪದಲ್ಲಿ ತಪದಲ್ಲಿ ಹೊಂದುವತಿ ನೇಮದೊಳು
ವಿಪುಳಯಮನಿಯಮದೊಳು ಶಿವಯಜನ ಸಮಯದೊಳು
ಮಂತ್ರದೊಳು ತಂತ್ರದೊಳು ಧರ್ಮದೊಳು ದಾನದೊಳು
ಯಂತ್ರದೊಳು ಯಾಗದೊಳು ನಿರ್ಮಳಸ್ಥಾನದೊಳು
ರಕ್ಷೆಯೊಳು ಶಿಕ್ಷೆಯೊಳು ಸಕಲಕಾರ್ಯಂಗಳೊಳು
ದೀಕ್ಷಾವಿಧಾನದೊಳು ಸರ್ವ ಕರ್ಮಂಗಳೊಳು ೧೦೦
ಧರಿಸುತಂ ಮಾಡಿದೊಡೆ ಸಫಲಮಲ್ಲದೊಡಫಲ
ಉರುತರಂ ಗುರುತರಂ ಧರಿಸಿಪ್ಪುದಮೃತಫಲ

ಅರರೆ ಮನ್ಮಥಹರ ಮನೋಹರಂ ರುದ್ರಾಕ್ಷಿ
ಹರನಲ್ಲಿಗೈದಿಸುವ ಸತ್ಪಥಂ ರುದ್ರಾಕ್ಷಿ
ವಿಷಭೂಷಣಂ ತೊಡುವ ವಜ್ರಾಂಗಿ ರುದ್ರಾಕ್ಷಿ
ವೃಷಭರಾಜನ ಪಕ್ಕರಕ್ಕೆಯೀ ರುದ್ರಾಕ್ಷಿ
ಗಿರಿಜೆ ತೊಡುವಂಗಿಗಳ ಸಂಗಡಂ ರುದ್ರಾಕ್ಷಿ
ಹರನ ಮಣಿಮಯಮಕುಟಮಂಡನಂ ರುದ್ರಾಕ್ಷಿ
ಪರಮನ ಜಟಾಸ್ತೋಮರಾಮವೀ ರುದ್ರಾಕ್ಷಿ
ಪರಮೇಶ್ವರನ ತನು ಪ್ರೇಮವೀ ರುದ್ರಾಕ್ಷಿ ೧೧೦

ಸಕಳನಿಧಿ ರುದ್ರಾಕ್ಷಿ
ಸುಕರಸುಧೆ ರುದ್ರಾಕ್ಷಿ
ಘನಮಹಿಮೆ ರುದ್ರಾಕ್ಷಿ
ಘನಘನಂ ರುದ್ರಾಕ್ಷಿ
ಅನುಪಮಂ ರುದ್ರಾಕ್ಷಿ
ನಿಗಮತತಿ ರುದ್ರಾಕ್ಷಿ ೧೧೬

ಸಂಗತಿಗಳು ರುದ್ರಾಕ್ಷಿ
ಸಿರಿಗೆ ಸಿರಿ ರುದ್ರಾಕ್ಷಿ
ವರಸಮಿತಿ ರುದ್ರಾಕ್ಷಿ
ಪರಮಗುರು ರುದ್ರಾಕ್ಷಿ
ಪರಶಿವಂ ರುದ್ರಾಕ್ಷಿ
ಸಿಂಗರಂ ರುದ್ರಾಕ್ಷಿ
ಜಂಗಮಂ ರುದ್ರಾಕ್ಷಿ
ಅಂಗರುಚಿ ರುದ್ರಾಕ್ಷಿ
ಮಂಗಳಂ ರುದ್ರಾಕ್ಷಿ
ಜಯತು ಸರ್ಪಾಭರಣವಿತತಿಗೆ ನಮೋಸ್ತುತೇ
ಜಯತು ಪಂಪಾ ವಿರೂಪಾಕ್ಷಂ ನಮೋಸ್ತುತೇ

**ಶಾರ್ದೂಲ ವಿಕ್ರೀಡಿತ:**

ಮೋಕ್ಷ ಶ್ರೀಸದನಂ ಪ್ರಸಿದ್ಧವದನಂ ರುದ್ರಾಕ್ಷಿ ರುದ್ರಾಕ್ಷಿ ಶ-
ರ್ವಾಕ್ಷಿಪ್ರೌಢತೆಯುನ್ನತೋನ್ನತಕರಂ ರುದ್ರಾಕ್ಷಿ ರುದ್ರಾಕ್ಷಿ ತಾಂ
ಸಾಕ್ಷಾಚ್ಛಂಕರಮೂರ್ತಿ ಕೀರ್ತಿಕಳಶಂ ರುದ್ರಾಕ್ಷಿ ರುದ್ರಾಕ್ಷಿ ಸು-
ಪ್ರೇಕ್ಷ ಪ್ರಸ್ಫುರಿತ ಪ್ರಮೋದಚರಿತಂ ಪಂಪಾ ವಿರೂಪಾಕ್ಷನಾ ॥೧॥

**ರುದ್ರಾಕ್ಷಿಯ ರಗಳೆ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ಶ್ರೀ**

# ಪಂಚಾಕ್ಷರಿಮಂತ್ರ ಮಹಿಮೆ

## ೧೦

**ಸ್ರಗ್ಧರಾವೃತ್ತ ॥**

ಶ್ರೀಮತ್ ಪಂಚಾಕ್ಷರಿ ಮಂತ್ರದ ಘನಸಾಮರ್ಥ್ಯಮಂ ಬಣ್ಣಿಸಲ್ ಸು-
ತ್ರಾಮಾದಿ ಪ್ರೌಢದೇವಪ್ರತತಿಗರಿದೆನಲ್ ಮರ್ತ್ಯರೊಳ್ ಭಕ್ತಿಮಾತ್ರಂ
ಸಾಮಾನ್ಯಂ ಬಣ್ಣಿಪೆಂ ಬಣ್ಣಿಸೆನೆನೆ ಪರಿಹಾಸಾಸ್ಪದಂ ಪ್ರೀತಿಯಿಂದಂ
ಪ್ರೇಮಂ ಕೈಮಿಕ್ಕು ಬಲ್ಲಂದದೆ ಪೊಗಳ್ದಪೆನಾಂ ಶ್ರೀ ವಿರೂಪಾಕ್ಷಲಿಂಗಾ

**ಮಂದಾನಿಲ ರಗಳೆ**

ಶ್ರೀಗುರು ಶಂಕರದೇವರ ದಯೆಯಿಂ
ರಾಗದಿ ಮಾದರಸರ ಘನ ಕೃಪೆಯಿಂ
ಗುರು ಹಂಪೆಯ ಮಾಯ್ದೇವರ ದಯದೊಳ್
ವರ ಪಂಚಾಕ್ಷರಿಯಂ ಧಾರುಣಿಯೊಳ್
ಬಣ್ಣಿಸಿದೇಂ **ಹಂಪೆಯ ಹರಿದೇವಂ**
ಬಣ್ಣಿಸಲಳವಲ್ಲಲ್ಲತಿ ಭಾವಂ
ಆದೊಡೆಮೆನಗುಳ್ಳಂತುಟು ಮತಿಯೊಳ್
ಸಾದರದಿಂ ಬಣ್ಣಿಸುವೇಂ ಕ್ಷಿತಿಯೊಳ್.
ಶ್ರೀ ಪಂಪಾಪುರದರಸನನಾಮಂ
ಭಾಪುರೆ ಶರಣರ ಪರಮ ಪ್ರೇಮಂ
ಹರಭಕ್ತರನುದ್ಧರಿಪಭಿಧಾನಂ
ಶರಣನೊಲವಿಂ ಪೊರೆವ ವಿಧಾನಂ
ನೋಡೆ 'ಅ'ಕಾರ 'ಉ'ಕಾರ 'ಮ'ಕಾರಂ
ಕೂಡಲ್ ಬಿಂದು ಸಹಿತಲೋಂಕಾರಂ
ತುದಿಯೊಳ್ ನಮಶ್ಶಿವಾಯೆನುತಿಪ್ಪುದು
ಮದನಾರಿಯನೊಲವಿಂ ಪಿಡಿತಪ್ಪುದು

ವೇದದ ಮಾತೆಪಿತಂ ಪಂಚಾಕ್ಷರಿ
ವೇದನಿಧಾನಂ ಶ್ರೀ ಪಂಚಾಕ್ಷರಿ
ಶಾಸ್ತ್ರದ ಸರ್ವಸ್ವಂ ಪಂಚಾಕ್ಷರಿ
ವಿಶ್ರುತವೆಲ್ಲಱೊಳುಂ ಪಂಚಾಕ್ಷರಿ
ಸಕಲ ಪುರಾಣದೊಳುಂ ಪಂಚಾಕ್ಷರಿ
ಸಕಲ ಸ್ಮೃತಿಗಳೊಳುಂ ಪಂಚಾಕ್ಷರಿ
ಮಂತ್ರದ ತಂತ್ರದ ಗತಿ ಪಂಚಾಕ್ಷರಿ
ಯಂತದ್ರ ಯಾಗದ ಪತಿ ಪಂಚಾಕ್ಷರಿ
ಮುಂಚಂ ಶುದ್ಧಗಿ ಯೋದುವರೆಲ್ಲಂ
ಪಂಚಾಕ್ಷರಿಯೋದವುದಿಳೆಯೆಲ್ಲಂ
ಕಡೆಯೊಳ್ ಪಂಚಾಕ್ಷರಿಯೆ ವಿಧಾನಂ
ಬಿಡದೆ ಸಮಾಪ್ತಿಯೆನಿಪ್ಪುದನೂನಂ
ಅದಱಿಂ ಪಂಚಾಕ್ಷರಿಯೇ ಸತ್ಯಂ
ಸದಮಳ ಪಂಚಾಕ್ಷರಿಯೇ ನಿತ್ಯಂ
ಪಂಚಾಕ್ಷರಿ ಪರಮನ ಪರಮಾರ್ಥಂ
ಪಂಚಾಕ್ಷರಿ ಶಿವಭಕ್ತಿಗೆ ಸ್ವಾರ್ಥಂ
ಪಂಚಾಕ್ಷರಿ ಜಿಹ್ವೆಯ ಪುಣ್ಯಾರ್ಥಂ
ಪಂಚಾಕ್ಷರಿ ಕರ್ಣಾಮೃತ ತೀರ್ಥಂ
ಗಿರಿಜಾದೇವಿಯ ಗುರು ಪಂಚಾಕ್ಷರಿ
ಹರಿಬೊಮ್ಮರ ಸುರತರು ಪಂಚಾಕ್ಷರಿ
ಗಣಪತಿಗುಹರನುಮತಿ ಪಂಚಾಕ್ಷರಿ
ಗಣ ಸಂಕುಳದುನ್ನತಿ ಪಂಚಾಕ್ಷರಿ
ಮುನಿಗಳ ಮುಕ್ತಿಯ ಬೆಳೆ ಪಂಚಾಕ್ಷರಿ
ಮನುಗಳ ಚಿತ್ತದ ಕಳೆ ಪಂಚಾಕ್ಷರಿ
ಶಿವನ ನಿವಾಸಂ ಶ್ರೀ ಪಂಚಾಕ್ಷರಿ
ಭವನ ಪರಾನಂದಂ ಪಂಚಾಕ್ಷರಿ
ಶರ್ವನ ಪಂಚಮುಖಂ ಪಂಚಾಕ್ಷರಿ
ಶರ್ವನ ಸಾಮರ್ಥ್ಯಂ ಪಂಚಾಕ್ಷರಿ
ಪರಮ ಕಣ್ಣುಂ ಗತಿ ಪಂಚಾಕ್ಷರಿ
ಪರಮನ ಮತಿಯುನ್ನತಿ ಪಂಚಾಕ್ಷರಿ

ಈಶ್ವರ ಜಪಮಾಲೆಯು ಪಂಚಾಕ್ಷರಿ
ಶಾಶ್ವತ ಸುಖಲೀಲೆಯು ಪಂಚಾಕ್ಷರಿ
ಶಿವಸರ್ವಾವಯವಂ ಪಂಚಾಕ್ಷರಿ
ಶಿವನ ಮನೋಹರವೀ ಪಂಚಾಕ್ಷರಿ
ಶಿವ ಕರ್ಣಾಭರಣಂ ಪಂಚಾಕ್ಷರಿ
ಶಿವನಂತಃಕರಣಂ ಪಂಚಾಕ್ಷರಿ
ಪಂಚಬ್ರಹ್ಮಂ ಶ್ರೀ ಪಂಚಾಕ್ಷರಿ
ಪಂಚಾವರಣ ಪ್ರಭು ಪಂಚಾಕ್ಷರಿ
ಸತ್ಯದ ಸಾಕಾರಂ ಪಂಚಾಕ್ಷರಿ
ನಿತ್ಯದ ನಿಳಯಂ ಶ್ರೀ ಪಂಚಾಕ್ಷರಿ
ಶರಣಾಳಿಯ ಸುರತರು ಪಂಚಾಕ್ಷರಿ
ಹರನಂ ತೋಱುವ ಗುರು ಪಂಚಾಕ್ಷರಿ
ಜ್ಞಾನಲತೆಯ ಕಂದಂ ಪಂಚಾಕ್ಷರಿ
ನಾನಾ ರುದ್ರಪದಂ ಪಂಚಾಕ್ಷರಿ

ಪರಮಜ್ಯೋತಿರ್ಲತೆ ಪಂಚಾಕ್ಷರಿ
ಪರಮಪವಿತ್ರಂ ಶ್ರೀ ಪಂಚಾಕ್ಷರಿ
ಪರಮಜ್ಞಾನದ ಮೊನೆ ಪಂಚಾಕ್ಷರಿ
ಪರತತ್ತ್ವದ ನೆಲೆವನೆ ಪಂಚಾಕ್ಷರಿ
ಅಘಕುಲವನದಾವಂ ಪಂಚಾಕ್ಷರಿ
ಅಘಹರನತಿಭಾವಂ ಪಂಚಾಕ್ಷರಿ
ಅಕ್ಷರ ಕುಲಬೀಜಂ ಪಂಚಾಕ್ಷರಿ
ರಕ್ಷಗೆ ರಕ್ಷಾನಿಧಿ ಪಂಚಾಕ್ಷರಿ
ಶಬ್ದಬ್ರಹ್ಮಂ ಶ್ರೀ ಪಂಚಾಕ್ಷರಿ
ಶಬ್ದಾಮೃತರಸವೀ ಪ
ಗುರುಪದವಶ್ಯಂ ಶ್ರೀ ಪಂಚಾಕ್ಷರಿ
ದುರಿತವಿನಾಶಂ ಶ್ರೀ ಪಂಚಾಕ್ಷರಿ

ಪ್ರಣವದ ಚೂಡಾಮಣಿ ಪಂಚಾಕ್ಷರಿ
ಪ್ರಣವಲತಾಫಲವೀ ಪಂಚಾಕ್ಷರಿ
ಶಿವವಿಸ್ತಾರಂ ಶ್ರೀ ಪಂಚಾಕ್ಷರಿ
ಶಿವನ ಸುಖಾಕಾರಂ ಪಂಚಾಕ್ಷರಿ
ಸಕಲಾಗಮದೊಳಗಿತಿದೆ ಮುಖ್ಯಂ
ಸಕಲಧ್ವರದೊಳಗಿದೆ ತತ್ವಾಕ್ಯಂ
ಎಲ್ಲಿದ್ದಾರ್ದೊಡನಿದನುಚ್ಚರಿಪುದು
ಎಲ್ಲಾ ಕಾಲದೊಳೊಲ್ದುಚ್ಚರಿಪುದು
ಸರ್ವ ಕ್ರಿಯೆಗಳೊಳುಂ ಜಪಿಯಿಪ್ಪುದು
ಸರ್ವಾರಾಧನೆಯೊಳ್ ಜಪಿಯಿಪ್ಪುದು
ವಿಧಿಯಿಲ್ಲಿಲ್ಲ ನಿಷೇಧಮದಿಲ್ಲಂ
ವಿಧಿವಶವೆಂಬುದು ತನಗಿಲ್ಲಿಲ್ಲಂ
ಪಂಚಮಹಾಪಾತಕ ಪರಿಹಾರಂ
ಸಂಚಿತದುಷ್ಕರ್ಮಗಳನಿವಾರಂ
ಕುಲಕೋಟಿಯನೊಲವಿಂದುದ್ಧರಿಪುದು
ಸಲೆ ಶಿವಸಾಯುಜ್ಯವನೊಲಿದೀವುದು

ಸಿದ್ಧಿಗೆ ಸಿದ್ಧಿಕರಂ ಪಂಚಾಕ್ಷರಿ
ಬುದ್ಧಿಗೆ ಭೂಷಣವೀ ಪಂಚಾಕ್ಷರಿ
ಸರ್ವಾಧಿಕ್ಯಂ ಶ್ರೀ ಪಂಚಾಕ್ಷರಿ
ಸರ್ವಸುಲಭವಾಹಂ ಪಂಚಾಕ್ಷರಿ
ಸ್ಥೂಲಂ ಸೂಕ್ಷ್ಮಂ ಶ್ರೀ ಪಂಚಾಕ್ಷರಿ
ನೀಲಗಳನನೀಜವೀ ಪಂಚಾಕ್ಷರಿ
ಭಕ್ತರ ಮುಕ್ತಿಯು ಮೊಳೆ ಪಂಚಾಕ್ಷರಿ
ಭಕ್ತಿಯ ಭಾಗ್ಯದ ಬೆಳೆ ಪಂಚಾಕ್ಷರಿ
ಶರಣರ ಪರುಷದ ಖಣಿ ಪಂಚಾಕ್ಷರಿ
ಶರಣರ ಚಿಂತಾಮಣಿ ಪಂಚಾಕ್ಷರಿ

ತ್ರೈಲೋಕಕ್ಕಧಿಪತಿ ಪಂಚಾಕ್ಷರಿ
ಭಾಳಾಕ್ಷನ ಮುಖತತಿ ಪಂಚಾಕ್ಷರಿ
ಗುರುಪದವಶ್ಯಂ ಶ್ರೀ ಪಂಚಾಕ್ಷರಿ
ದುರಿತಘರಟ್ಟಂ ಘನಪಂಚಾಕ್ಷರಿ ೬೦

ಮಱಿದುಚ್ಚರಿಸಲು ಸುಖಪದವೀವುದು
ಅಱಿದುಚ್ಚರಿಸಲು ಸುರಪದಮೀವುದು
ಪದಪಿಂ ನೆನೆದೊಡೆ ಗಣಪದವೀವುದು
ಮುದದಿಂ ನೆನೆದೊಡೆ ಶಿವನಂ ಮಾಳ್ಪುದು

ಸಂಪದವಖಿಳಪದಂ ಪಂಚಾಕ್ಷರಿ
ಇಂಪುಂ ಸೂಸುವ ಸುಧೆ ಪಂಚಾಕ್ಷರಿ
ಅಣಿಮಾದ್ಯಷ್ಟಗುಣಂ ಪಂಚಾಕ್ಷರಿ
ತ್ರಿಣಯನ ರಾಜಗೃಹಂ ಪಂಚಾಕ್ಷರಿ
ಉರುತರ ಪರಮಪದಂ ಪಂಚಾಕ್ಷರಿ
ಪರಲಿಂಗಂ ಪರವೀ ಪಂಚಾಕ್ಷರಿ
ಮಂತ್ರದ ಮಂತ್ರಂ ಶೈವದ ಶೈವಂ
ಮಂತ್ರಮುಖಕ್ಕಧಿದೈವದ ದೈವಂ

ಸತ್ಯದ ಸತ್ಯಂ ಶ್ರೀ ಪಂಚಾಕ್ಷರಿ
ನಿತ್ಯದ ನಿತ್ಯಂ ಶ್ರೀ ಪಂಚಾಕ್ಷರಿ
ಅತ್ಯಧಿಕಂ ಸದ್ಗತಿ ಪಂಚಾಕ್ಷರಿ
ಅತ್ಯನುಪಮದುನ್ನತಿ ಪಂಚಾಕ್ಷರಿ
ಜನನಮರಣರಹಿತಂ ಪಂಚಾಕ್ಷರಿ
ನೆನೆವರ ದುರಿತಹರಂ ಪಂಚಾಕ್ಷರಿ
ಅನವಧಿ ಪರಮಹಿತಂ ಪಂಚಾಕ್ಷರಿ
ಗುರು ಪಂಚಾಕ್ಷರಿ ಸಿರಿ ಪಂಚಾಕ್ಷರಿ
ಗತಿ ಪಂಚಾಕ್ಷರಿ ಮತಿ ಪಂಚಾಕ್ಷರಿ ೧೧೦

ಶೃತಿ ಪಂಚಾಕ್ಷರಿ
ಸ್ಮೃತಿ ಪಂಚಾಕ್ಷರಿ
ದಯ ಪಂಚಾಕ್ಷರಿ
ಜಯ ಪಂಚಾಕ್ಷರಿ
ಜಯತು ಜಯತು ಜಯಂತು ನಮಸ್ತೇ ನಮ:

ಕಂದ

ಹರಿಅಜಸುರನರಪನ್ನಗ
ಧರರೊಳ್ ಪಂಪಾಪುರಾಧಿನಾಥನ ಪಂಚಾ
ಕ್ಷರಿ ಪಂಚಾಕ್ಷರಿ ಪಂಚಾ
ಕ್ಷರಿಯಲ್ಲದೆ ಬೇರೆ ಮಂತ್ರಮದುಂಟೇ ॥ ೧ ॥

ಪಂಚಾಕ್ಷರಿ ಮಂತ್ರಮಹಿಮೆ ಸಮಾಪ್ತಂ

ಮಂಗಳಮಹಾ ಶ್ರೀ ಶ್ರೀ ಶ್ರೀ

# ಪುಷ್ಪದ ರಗಳೆ

## ೧೧

ಕಂದ॥

ಲೀಲೆಯೊಳೋಲೈಪೆಂ ಮಧು ।
ರಾಲಾಪದೆ ಪುಷ್ಪರಗಳೆಯೆಂಬೀ ಪೊಸ ಪೂ॥
ಮಾಲೆಯ‌ನವಧರಿಸಗಜಾ ।
ಲೋಲ ಮಹಾಶೀಲ ಹಂಪೆಯ ವಿರೂಪಾಕ್ಷ ॥

**ಲಲಿತ ರಗಳೆ**

ಶ್ರೀ ಸಕಲಸುರಮಕುಟನಿಕರರಂಜಿತಚರಣ
ಭಾಸುರಾದಿತ್ಯಕೋಟಿಪ್ರಭಾಘನಕಿರಣ
ಹರುಷದಿಂ ಬೇಡುವೆಂ ನಿನ್ನನುತ್ಸವದಿಂದೆ
ಕರುಣಿಪುದು ಹಂಪೆಯ ವಿರೂಪಾಕ್ಷ ದಯೆಯಿಂದೆ
ಪೊಚ್ಚಪೊಸ ಪೂಗಳಿಂದರ್ಚಿಸುವುದಂ ದೇವ
ಅಚ್ಚರಿಯೊಳಿತ್ತು ಕರುಣಿಸುವುದೆನಗೆಲೆ ದೇವ
ಎಂದು ಪಂಪಾಪುರದೊಳಾನೆಳ್ದು ಕೊಂಡಾಡಿ
ಮುಂದೆ ಜಾವದೊಳೆ ಭಸಿತೋದ್ಧೂಳನವ ಮಾಡಿ
ಪರಿಮಳಪೊಸರದುತೆ ಬಿಗಿದು ನೆಯ್ದೊಪ್ಪಿರ್ದ
ಪರಿವರಿಯ ಕರಡಿಗಯನಾಂತುಕೊಂಡೆಸೆದಿರ್ದ ೧೦

ನಿನ್ನ ಗೀತಂಗಳಂ ಹರುಷದಿಂ ಪಾಡುತುಂ
ನಿನ್ನ ಪದ್ಯಂಗಳಂ ಪುಳಕಿಸುತ್ತೋದುತುಂ
ನಿನ್ನವರ ಕೀರ್ತಿಯುಂ ಕೈವಾರಿಸುತೆ ಬರುತೆ
ನಿನ್ನವರ ಮೂರ್ತಿಯುಂ ನೆನೆದು ಕರಗುತೆ ಬರುತೆ
ಪರಿಮಳದ ಸುಗ್ಗಿ ಸೌರಭದ ಸಂದಣಿಯೆನಿಪ
ಸುರಚಿರಾಮೋದದ ರಸಾಂಬೋಧಿಯೆಂದೆನಿಪ

ಉರವಣಿಪ ಕಂಪಿನ ಪರಮಸೀಮೆಯೆಂದೆನಿಪ
ಸುರತರು ಸುಗಂಧದ ತವರ್ಮನೆಯಿದೆಂದೆನಿಪ
ಪೂದೋಂಟವಂ ದೂರದಿಂ ಕಂಡು ಸೋಂಪೇಱಿ
ಆದ ಪರಮಾನಂದದಿಂದುಕ್ಕಿ ನೆಲವೇಱಿ
ಪುಟವೇಳುತಡ್ಡಮುಂ ತಿಗಟಮುಂ ಪರಿದಾಡಿ
ನಟನಂತಿರುಗ್ಗಡಿಸಿ ಕುಣಿಕುಣಿದು ಕೂಗಾಡಿ
ಬೆಲ್ಲವತ್ತಮನುತ್ತರಣೆಯನುನ್ಮತ್ತಮಂ
ಪಲ್ಲವಿತ ಕಕ್ಕೆ ಬಿಳಿಯಕ್ಕಿಗಳ ಮೊತ್ತಮಂ
ರುದ್ರಜಟೆಯಂ ತುಂಬೆಯುಂ ಕಂಚಿವಾಳಮಂ
ಭದ್ರಮುಖಿ ಮೊದಲಾದ ನವಪತ್ರಜಾಲಮಂ
ಕಂಡು ಪತ್ರಾಳಿಗಳ್ಗೆಱಗಿ ಶರಣೆಂದೆನುತೆ
ಕಂಡೆಂ ಫಲಂ ಪಿರಿದು ನೀವುಮಿಂತಿರಿಯೆನುತೆ
ಬಗೆಯೆ ಪೂವಂ ಕಂಡು ಮಿಗೆ ಶರಣು ನಿಮಗೆನುತೆ
ನಗುತಲ್ಲಿ ದೊಡ್ಡಿಪತ್ರೆಗೆ ನೆಱೆ ನಮೋಯೆನುತೆ
ಬರವರಲ್ ಮುಂಗುಡಿಯ ಕಂಪು ಕರದಿಂ ತೀಡೆ
ಹರಹರ ವಿರೂಪಾಕ್ಷ ನಿನಗೆನುತ್ತಂ ಕೂಡೆ
ಮನದಿಂದೆ ಕೈಕೊಳ್ವ ಮುನ್ನಮೀ ಗಂಧಮಂ
ನಿನಗೆ ಬಳಿಕೀವೆನುತ್ತಮ ಕುಸುಮವೃಂದಮಂ
ಎಂದರ್ಪಿಸುತೆ ಪೂದೋಂಟಮಂ ಕೈಮಿಕ್ಕು
ಬಂದು ಪುಳುಕಿಸುತೆ ಪರಮಾನಂದದಿಂ ಪೊಕ್ಕು
ತೂಗಾಡಿ ತೊನೆದಾಡುತಾಹಾ! ವಿರೂಪಾಕ್ಷ
ಪೂಗಳಂ ನಡೆನೋಡುತಾಹಾ! ವಿರೂಪಾಕ್ಷ
ಎಂದೆನುತೆ ಹಿಗ್ಗಿ ಹೊಗಳುತ್ತೊಲ್ದು ನಲಿವುತ್ತೆ
ಚೆಂದಚೆಂದದ ಕುಸುಮವೃಂದಮಂ ನೋಡುತ್ತೆ
ಎನಗಿಂತು ಕರುಣಿಸಿದನೆ ಸದಾಶಿವನೆನುತ್ತೆ
ಮನದೊಳಗೆ ಹರುಷದಿಂ ನಲಿನಲಿದು ನೋಡುತ್ತೆ

ಅಳಿಯೆಱಗದನಿಲನಲುಗದ ರವಿಕರಂ ಪುಗದ
ಬೆಳೆಬೆಳೆದು ನಳಿನಳಿಸಿ ಮಘಮಘಿಸಿ ಕವಿದಿಡಿದ
ಇರವಂತಿಯಿರೆ ಕಂಡು ನೋಡಲಮ್ಮದೆ ನಿಂದು
ಪರಿಶಿವಂಗೋಲೈಪ ಪೂವ ನೀಡೌಯೆಂದು
ನನೆಮುಗುಳ ಕೊನೆಮುಗುಳ ಬಿರಿಮುಗುಳರಳ್ಗಳಿಂ
ತನಿಗಂಪು ತೀವಿರ್ದ ಪೊಚ್ಚ ಪೊಸಪೂಗಳಂ
ಕೊಂಡು ಕುಕಿಲಿಱಿವುತುಂ ಕುಣಿವುತುಂ ನಡೆತಂದು
ಕಂಡು ಸಂಪಗೆಯ ಮರನಿರ್ದ್ದೆಡೆಗೆ ಪರಿತಂದು

ಏನವ್ವ ಸಂಪಗೆಯೆ ಶಿವನ ಸಿರಿಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು ನೀಡೆಂದು
ಅಳಿಮನದ ಪರಿಯೆಂದು ಬಗೆಯದಿರ್ನೀನೆನುತೆ
ತಿಳಿದು ಪೊಸ ಪೂಗಳಂ ನೀಡವ್ವ ನೀನೆನುತೆ
ಆನಂದದಿಂದೆ ಶಿವಲಿಂಗಕರ್ಚಿಪೆನೆನುತೆ
ಏನವ್ವ ನೀಡು ಬಿರಿಮುಗುಳ ಸಂಪಿಗೆಯೆನುತೆ
ಅಂತವಂ ಕೊಂಡು ಸೇವಂತಿಯಲ್ಲಿಗೆ ಬಂದು
ಮುಂತೆ ಕುಂಕುಮದ ತಾರಗೆಗಳಂತಿರಲಂದು
ಎಲೆಲೆ ಪರಿಮಳದ ತಣ್ಪಂಗತಿಯೆ ಬಾರವ್ವ
ಕುಲಪತಿಯ ಜಡೆಗಳ್ಗೆ ಪೂಗಳಂ ತಾರವ್ವ

ದೇವಂಗೆ ದೇವರಶಿಖಾಮಣಿಯ ಜಡೆಮುಡಿಗೆ
ಸೇವಂತಿ ನೀನೀವ ಪೂಗಳಂ ನೀಡೆನಗೆ
ಎಂದಲ್ಲಿ ಪರಿಮಳದ ಪನಿನೀರ ಪೂಗೊಂಡು
ಮುಂದೆ ತೋಱುತ್ತಿರ್ಪ್ಪ ಪೂಗಿಡುಗಳಂ ಕಂಡು
ಅದೆ ಮಲ್ಲಿಕಾಲತೆ ವಿರೂಪಾಕ್ಷ ನಿನಗೆನುತೆ
ಅದೆ ಮಾಧವೀಲತೆ ವಿರೂಪಾಕ್ಷ ನಿನಗೆನುತೆ
ಮಲ್ಲಿಗೆಯ ಮುಂದಕ್ಕೆ ಮನವಾರೆ ನಡೆಗೊಂಡು
ಸಲ್ಲೀಲೆವೆರ್ಚಿ ಕಂಪಿನ ನಿಧಿಯಿರಲ್ ಕಂಡು

ಹಸುರಳಿದು ಬೆಳ್ಪುಳಿದು ನನೆಯೇಱಿ ಹೊದೆದೋಱಿ
ಹೊಸಪರಿಯ ಬಿರಿಮುಗುಳ್ಗಳಿರೆ ಬೀಗಿ ನಲವೇಱಿ
ಮಲ್ಲಿಗೆಯರಳ್ಗಳಂ ಮನವಾರೆ ತಿಱಿವುತುಂ
ಮೆಲ್ಲಮೆಲ್ಲನೆ ನೋಡುತಲ್ಲಲ್ಲಿ ಕುಣಿವುತುಂ

ಏನವ್ವ ಆದಿರ್ಗಂತಿ ತುಂಬಿತುಳಕದ ಮುನ್ನ
ಆನಂದನಿಧಿ ಶಿವಂಗಳ್ಕಱಿಂದಂ ನಿನ್ನ
ಸುಖದ ಮೀಸಲ ನವಸುಗಂಧಮಂ ನೀಡೆನುತೆ
ಮುಖಮೈದಱಿವಗೆ ಸಂದೊಡೆ ಬದ್ದುರ್ಂಕುವೆನೆನುತೆ
ಪೊಸ ಪೂವನಲ್ಲಿ ಕೊಂಡಾಡುತ್ತೆ ನಡೆತಂದು
ಎಸೆವ ಜಾತಿಯ ಸಮೀಪಕ್ಕೆ ಮನಮಂ ತಂದು
ಜಾತಿ ! ನೀನೇ ಸಕಲ ಪುಷ್ಪಜಾತಿಗೆ ಜಾತಿ
ಬೂತೇಶ್ವರನ ಜಡೆಯಮುಡಿಗೇಱಿದೊಡೆ ಜಾತಿ
ಎಂದು ಪೊಗಳುತ್ತಲ್ಲಿ ಪೊಸ ಕುಸುಮಮಂ ಕೊಂಡು
ಮುಂದೆ ಮಘಮಘಿಪ ಕೇತಿಕಿಯಿರೆ ಮನಂಗೊಂಡು
ಹೊಱಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ
ಹೆಱಿಸೂಡಿದನ ಗುಪ್ತಭಕ್ತನಂತಿರ್ಪ ಪರಿ
ಅಹ ! ದೆಸೆದೆಸೆಗೆ ಬೀಱುವ ಸುಗಂಧದ ಸೂಱೆ
ಆಹ ! ಕೇತಿಕಿ ನಿನ್ನ ಪರಿಮಳದ ಪರಿ ಬೇಱೆ
ಪರಿಮಳಂ ಸುಳಿಗೊಂಡು ಬೆಳೆದು ಕವಲಿಱಿಯಿತ್ತೊ!
ಉರವಣಿಸಿ ಬೆಳೆವ ಪರಿಮಳಕೆ ಗಱಿಮೂಡಿತ್ತೊ!

ಎಂದಲ್ಲಿ ಪರಿಮಳದ ಕೇತಕಿಗಳಂ ಕೊಂಡು
ಮುಂದೆ ತೋಱುತ್ತಿರ್ಪ ಪಡ್ಡಳಿಯಿರಲ್ ಕಂಡು
ತಾರೆಗಳ ಮೊಳೆಗಳಂತಿರ್ದ್ದ ಪಡ್ಡಳಿಗಳಂ
ಹಾರೈಸುತುಂ ಕೊಂಡು ಬಿಳಿಯ ಕತ್ತುರಿಗಳಂ
ಹೇರೀಳೆ ಪರಿಮಳಾಸಾರಮಂ ನೀನಲ್ಲಿ
ಮಾರಾರಿಗೀಯೆನುತ್ತುಂ ಪೂಗೊಳುತ್ತಲ್ಲಿ

ಮೊಲ್ಲೆಯುಂ ಮುದ್ದಾಡಿಸುತ್ತೆ ಮನ್ನಿಸಿ ನುಡಿದು
ವಲ್ಲಭಂಗಿವು ತಕ್ಕವೆನುತೆ ಪೂವಂ ಪಿಡಿದು
ತಿರುಗಿ ನೋಡಲ್ ಮರುಗಮಿತ್ತ ಬಾರೆನುತಮಿರೆ
ಹರ ಮಂಱಿಪನೇ! ಪರಿಮಳದ ಸಸಿಯುನೆನುತ ಬರೆ
ತೆಗೆದುಕೊಳುತಲ್ಲಿ ಪರಿಮಳಪಲ್ಲವಂಗಳಂ
ಬಗೆ ಮಿಗಿಲ್ ಸಸಿಯ ಸೌರಭದ ಸಂದಣಿಗಳಂ
ಹಾರೈಸುತಂ ಬಂದು ಮಡಿವಾಳದೊಳ್ನಿಂದು
ಬೇರ ಬಲ್ಲವರ್ಗೆ ನೀನೆಲೆದೋಱಲೇಕೆಂದು
ಪರಿಮಳದ ಬೇರ್ಗಳಂ ಮನವಾರೆ ತಿಱಿವುತುಂ
ಪರಿಪರಿಯ ಕಂಪಿನೊಳ್ ಮುಳುಗುತು ಮೂಡುತುಂ
ದವನವೇ ! ಶಿವನ ಪರಿಮಳದ ಹಬ್ಬವೆ ಬಾರ
ಭುವನದೊಳ್ನಿನಗೆ ಸರಿಯಿಲ್ಲ ಸೌರಭಸಾರ
ಎನುತೆ ಕುಣಿವುತೆ ಕೂಗಿ ಕುಕಿಲಿಱಿವುತುಂ ಬಂದು
ಕೊನರ್ವ ಪುಳಕಂಗಳಿಂ ಪಲ್ಲವಿಸುತುಂ ನಿಂದು
ಅಲ್ಲಿಂದಬಂದು ಸುರಹೊನ್ನೆಯಲ್ಲಿಗೆ ನಿಂದು

ಏನೆನ್ನ ಹೊನ್ನೆ ಸುರಹೊನ್ನೆ ಪರಿಮಳದರಸಿ
ನೀಮುನ್ನ ಪುಲಿಗೆಱಿಗೆ ಸೋಮಯ್ಯನಂ ಕರಸಿ
ಕೊಂಡೆ ಸದ್ಭಕ್ತೆ ಸರಿಯುಂಟೆ ಬಾ ನಿನಗೆನುತೆ
ಕೊಂಡಲ್ಲಿ ದಿವ್ಯ ಪ್ರಸೂನಮುಂ ನಡೆತರುತೆ
ಅಲ್ಲಿಂದ ಬಂದು ಪೊಸಪೂಗಳಂ ಗೈದುತ್ತೆ
ಆಹ! ಭಾಗ್ಯವೆ ಶಿವನನಿದಿಱೊಳರ್ಚಿಸಿ ಪಡೆದೆ
ನಾಹ ! ಪುಣ್ಯವೇ ಶಿವನ ನಿಱೊಳರ್ಚಿಸಿ ಪಡೆದೆ
ಎನುತಲ್ಲಿ ನಡೆಗೊಂಡು ಶಿವನ ಸಿಂಗರಕೆಂದು
ತನಿಗಂಪನೀವ ಪೊಸ ಪೂಗೊಳಕ್ಕೆಯಿತಂದು
ಕಮಲವೇ ಹರಿಗೆ ಚಕ್ರವನಿತ್ತ ಶಿವನಪದ
ಕಮಲಕ್ಕೆ ಸಾರ್ವುದುಚಿತಂ ನಿನಗೆ ಪರಮಪದ

ಇಂತೆಂದು ಹತ್ತೆಸಾರ್ದಂಬುಜಮನೆತ್ತುತುಂ
ಮುಂತೆ ಬಾಡಿದ ಕಮಲಮಂ ಕೆಲಕೆ ಸಾರ್ಚುತುಂ
ನೆಯ್ದಿಲೆಯೆ ಶಿವನಲ್ಲಿಗೈಯ್ದಲೇ ಬಗೆದಪ್ಪೆ
ಒಯ್ದೊಡೇನಂ ಲಂಚವೀವೆ ನೀನುಳಿದಪ್ಪೆ
ಚಂಗಣಗಿಲೇ ಬಾರ ಲಿಂಗದೊಲವೇ ಯೆನುತೆ
ಸಿಂಗರಿಸುವೆಂ ಪರಮನಂಘ್ರಿಯುಂಗಳನೆನುತೆ
ಹಿಂಗದೆ ಕೊಳಂಗಳ ಜಲಂಗಳೊಳ್ ಪೋಗಿರ್ದ್ದ
ಮಂಗಳಮೆನಿಪ್ಪ ಪೂವಂ ಕೊಂಡು ನಿಂದಿರ್ದ್ದ
ಎಸೆಯೆ ಪೊಱಮಟ್ಟ ಪರಿಮಳವುಳ್ಳ ಪೂಗಳಂ
ಪೆಸರಱಿಯದೇವೆನೋ! ಕಂಪುಳ್ಳ ಪೂಗಳಂ
ಕಂಡಱಿಯದೇವೆನೋ! ಪರಿಮಳಂ ಸಾಲ್ಗೆಂದು
ಕೊಂಡು ಪೊಸಪೂಗಳಂ ಶಿವನ ಸಿರಿಮುಡಿಗೆಂದು

ಬಂದೊಂದು ನಿರ್ಮಳಸ್ಥಾನವಂ ನೆಡೆ ನೋಡಿ
ಇಂದುಧರ ಶರಣೆನುತೆ ಪರಮಹರುಷಂಗೂಡಿ
ನಳನಳಿಸುತುಂ ಬೆಳೆದ ಬಾಲಚೂತದ ಕೆಳಗೆ
ಹೊಳೆ ಹೊಳೆವ ಚಂದ್ರಕಾಂತದ ಶಿಲಾತಲದೊಳಗೆ
ಕದಳೀದಳಂಗಳಂ ಕಮಲಪತ್ರಂಗಳಂ
ಮುದದಿಂದೆ ಬಾಳೆಯೊಳ್ದಿರುಳ ಪುಳಕಂಗಳಂ
ಪೊಂಬಾಳೆಗಳ ಸುಳಿಯ ಸಪುರನೇತ್ರಂಗಳಂ
ಇಂಬಱಿದು ಪಾಸಿ ಪರಿಮಳಭಾಜನಂಗಳಂ
ಅಲ್ಲಲ್ಲಿ ಮೆಲ್ಲಮೆಲ್ಲನೆ ಪೂಗಳಂ ಸುರಿದು
ಸಲ್ಲಲಿತವೆನಿಪ ಸರಸಿಜಸೂತ್ರಮಂ ಪಿಡಿದು

ಕೈಮುಟ್ಟಿಮುಟ್ಟದೆ ಮನಂ ಮುಟ್ಟಿಕಟ್ಟುತುಂ
ಕೈಮಱಿದು ಪೂ ಬೀಳೆ ಮಿಗೆ ಸತ್ತು ಹುಟ್ಟುತುಂ
ನೋಡಿದೊಡೆ ಪೂ ಬಾಡುಗೆಂದು ಕಣ್ಮುಚ್ಚುತುಂ
ನಾಡೆ ನೆನೆದೊಡೆ ಕುಂದುಗೆಂದು ಮನಬೆಚ್ಚುತುಂ

ನೋಡಿದೊಡೆ ಕೊಂಡಾಡುತುಂ ತೂಗಿ ತೊನೆವುತುಂ
ನೋಡುತ್ತೆ ಸಾಗಿಸುತ್ತೋವುತ್ತೆ ಮಲೆವುತುಂ
ನನೆಗಳರಲದ ಮುನ್ನೆ ಮನವಲರ್ದು ಪೊಂಗುತುಂ
ನನೆಬಿರುವುದರ್ಕೆ ಚಿತ್ತಂ ಬೀಗಿ ಬಿರಿವುತುಂ
ಮೊಗ್ಗೆಯೊಳ್ ಶಿವನನಿರಿಸಲ್ಬೇಡಿ ಬಯಸುತುಂ
ಹಿಗ್ಗದಲರ್ಗಳ ನಡುವೆ ಸಿಂಗರಿಸಲಾಡುತುಂ
ಇರಲಳಿಕುಲಂಗಳೆಲ್ಲಂ ತೋಂಟಮಂ ಪೊಕ್ಕು
ಪರಿದೊಕ್ಕಲಿಕ್ಕಿ ಪೂಗಾಣದೆ ಚಲಂ ಮಿಕ್ಕು
ಪರಿಮಳದ ಪಥವಿಡಿದು ಝೇಂಕರಿಸಿ ಬರುತುಮಿರೆ
ನೆರೆದು ಪಲ್ಮೊರೆವಂತೆ ಝೇಂಕರಿಸಿ ಬರುತುಮಿರೆ

**ಬೇಡೆಲೆಲೆ ಹಂಪೆಯರಸನಕುಮಾರಂ ಸಿತಗ**
**ನಾಡಂಬಂಗಳರ ಕೊಳ್ಳುನಾಱಡಿಗೆಱಗ**
ಅಳಿಯಾಸೆಬೇಡ ನಿಮಗಿಲ್ಲಿ ಸೋಲ್ವವರಿಲ್ಲ
ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ
ಎನುತಮೊಂದೆರಡು ಸಂಪಗೆಯರಲ್ಗಳಿಂದಿಡಲ್
ತನತನಗೆ ಪೊರ್ದಲಣ್ಮದೆ ಪೋದವಳಿಯಿಡಲ್
ಅಂತಲ್ಲಿ ಮಧುಕರಪ್ರಕರಮುಮನೆಬ್ಬಟ್ಟಿ
ಮುಂತಿರ್ದ ಪೊಸ ಪೂವನೋವಿ ಕೆಲವಂ ಕಟ್ಟಿ
ಅಲ್ಲಿಂದೆ ತಳರ್ದು ಹರನರಮನೆಗೆ ಮುಂತಾಗಿ
ಮೆಲ್ಲನಲುಗದೆ ಪುಷ್ಪವೊಂದದಿರದಂತಾಗಿ
ಶಿವನರಮನೆಗೆ ಬಂದು ಬಾಗಿಲೊಳ್ ನಿಂದಿರ್ದು
ಶಿವನುಪ್ಪವಡಿಸುವನ್ನೆವರಂ ಕಾಯ್ದಿರ್ದು
ಏನೆನ್ನ ಶಿವನೆ! ಉಪ್ಪವಡಿಸಿರ್ದಾ ತಂದೆ
ಏನಯ್ಯ! ತಳುವಿರ್ದನೆನುತಲಿರ್ದಾ ತಂದೆ
ಅಳಿಗಳೆಱಗದ ಗಂಧವಹನಲುಗದಲರ್ಗಳಂ
ಎಳಸಿತಂದೆಂ ತಂದೆ! ದೇವ ಪೊಸ ಪೂಗಳಂ

ಎಂದು ಬಿನ್ನೈಸುತ್ತೆ ಹತ್ತೆಸಾರ್ದೊಲವಿಂದೆ
ತಂದ ಪೊಸ ಸೇವಂತಿಯುರಲ ಪನಿನೀರಿಂದೆ
ಎಸೆವ ಮುಖಮಜ್ಜನಕ್ಕೆಱೆದು ಮಿಗೆ ಹಿಗ್ಗುತಂ
ಪೊಸ ಪರಾಗದ ವಿಭೂತಿಯ ತಿಲಕವಿಕ್ಕುತಂ
ಮಿಗೆ ಮೋಹದಿಂ ನೋಡಿ ಮನದೊಳಗೆ ತೂಪಿಱಿದು
ಮಘಮಘಿಪ ಕೇತಕಿಯ ನುಣ್ಣೆಸಳ್ಗಳಂ ಪಿಡಿದು
ಸಿರಿಮುಡಿಯನೊಯ್ಯನೆ ಸಡಿಲ್ಚಿ ನಯದಿಂ ಬಿಡಿಸಿ
ಪರಿಪರಿಯ ನೀಳ್ದ ಕೆಂಜೆಡೆಗಳಂ ನೆಲೆಗೊಳಿಸಿ
ಎಳೆಯ ಶಶಿಕಳೆ ನೋಯದಂತೆ ನಯದಿಂ ಹಿಕ್ಕಿ
ಹೊಳೆವ ಸುರನದಿ ತುಳ್ಕದಂತೆ ಮೆಲ್ಲಗೆ ಸಿಕ್ಕಿ
ಪೊಸ ಪಡ್ಡಳಿಯ ಪರಿಮಳದ ಕತ್ತುರಿಯನಿಕ್ಕಿ
ಸಸಿನಿಳಿವ ಜಡೆಗಳಂ ತಣ್ಪಿನೊಳಗಂಟಿಕ್ಕಿ

ಇರುವಂತಿಯುಂ ತಂದು ಸಿರಿಮುಡಿಯೊಳಗೆ ತುಱುಬಿ
ಬೆರಸಿಯುವಱಿಡೆಗಡೆಗೆ ಸೇವಂತಿಗಳ ತುಱುಬಿ
ಮಲ್ಲಿಗೆಯ ಪರಿಮಳದ ಚಂದನವನಣ್ಪಿಕ್ಕಿ
ಮೊಲ್ಲೆಯೊಳ್ಮುಗುಳ್ಗಳಿಂ ನಾಗಕುಂಡಲವಿಕ್ಕಿ
ಸಲ್ಲಲಿತ ಇರವಂತಿ ಕಂಠಮಾಲೆಯನಿಕ್ಕಿ
ಮೆಲ್ಲಿತಹ ದುಂಡಮಲ್ಲಿಗೆಯ ಪದಕವನಿಕ್ಕಿ
ಜಾದಿಯ ಸುಗಂಧದಿಂ ಮೃಗಮದವನೊಲ್ದಿತ್ತು
ಸಾದರಂ ಮಾಧವಿಯ ಮುದ್ರಿಕೆಯನೊಸೆದಿತ್ತು
ಮರುಗದೊಡ್ಡವಣೆಯಿಂ ಗಜಚರ್ಮವಂ ಪೊದಿಸಿ
ನೆರೆದ ಸಂಪಗೆಗಳಿಂ ಪುಲಿದೊವಲನೊಲ್ದುಡಿಸಿ
ಸುರಹೊನ್ನೆಯಲರ್ಗಳಿಂದುರಗಕಂಕಣವಿಕ್ಕಿ
ಚರಣದೊಳು ಕಮಲಕರ್ಣಿಕೆಯ ಮುದ್ರಿಕೆಯಿಕ್ಕಿ
ಕಮಲಂಗಳಂ ಚರಣಕಮಲದೊಳ್ ಕೈಗೊಳಿಸಿ
ಕುಮುದಂಗಳಂ ಕೂಡೆ ಕೆಲದೊಳಂ ಸಿಂಗರಿಸಿ

ರ್ಘೋಂಪಿಸುವ ದವನದಿಂದೊಲ್ದು ಸೀಗುರಿಯಿಕ್ಕಿ
ಕಂಪೆಸೆವ ಮಡಿವಾಳದಿಂದೆ ಚಾಮರವಿಕ್ಕಿ
ರಸಧೂಪ ಧೂಮದೊಡನೊಸೆಯಲಾರತಿಯೆತ್ತಿ
ಪೊಸಪಸಿಯ ಕಾಂತಿ ಮನದೊಳಗೆ ಬಳೆಯಲ್ ಮುತ್ತಿ
ಸಮೆದ ದೇವಾನ್ನಮಂ ದಿವಾನ್ನತತಿಗಳಂ
ಕ್ರಮದಿಂದಲಿತ್ತು ಕಡುಸವಿಯ ಸಂದಣಿಗಳಂ
ಇಂತು ನಲಿದಾರೋಗಿಸಲಿಕ್ಕಿ ತಾಂಬೂಲಮಂ
ಸಂತಸಂ ಮಿಗೆ ಕೊಟ್ಟು ಮುಖದ ಸುಖಜಾಲಮಂ
ಪೆಱಸಾರ್ದು ಕರುಣಪ್ರಸಾದಮಂ ಕೈಕೊಂಡು
ತೆಱಪಿಲ್ಲದುಗ್ಗಡದ ಶಿವಸುಖಮನೆಡೆಗೊಂಡು
ನೇಹದಿಂ ನೋಡುತುಂ ನಲ್ಮೆಯಿಂ ನೀಡುತುಂ
ಮೋಹದಿಂ ಬೇಡುತ್ತಮೆಯ್ದಿಸದೆ ಬಾಡುತುಂ

ದೇವ ಸುಕುಮಾರ ಶಶಿಶೇಖರ ವಿರೂಪಾಕ್ಷ
ದೇವ ಪರಿಮಳವೃಂದಸೇವಿತ ವಿರೂಪಾಕ್ಷ
ದೇವ ಎನ್ನಾಳ್ದ ಸುಖಮೂರುತಿಯೆ ವಿರೂಪಾಕ್ಷ
ದೇವ ಎನ್ನಯ್ಯ ಎನ್ನಾಳ್ದನೆ ವಿರೂಪಾಕ್ಷ
ಎಂದು ಹೊಗಳುತ್ತೆ ಹೊಂಗುತ್ತೆ ಹಾಡಿ ಪೆರ್ಚುತುಂ
ನಿಂದು ನಲಿದಾಡಿ ಮಲೆದಾಡಿ ಮೈವೆರ್ಚುತುಂ
ಪೂಜೆಯಂ ನೋಡುತ್ತೆ ಪುಟವೇಳುತಾಡುತುಂ
ಓಜೆಯಿಂ ಮೀಱುತ್ತೆ ಕರುಣಮಂ ತೋಱುತುಂ
ಕಂಪಿಸುತೆ ಪುಳಕಿಸುತೆ ಹಳವಿಸುತೆ ಝುಳಪಿಸುತೆ
ರ್ಘೋಂಪಿಸುತೆ ಜೋಲುತ್ತಮಮರುತ್ತೆ ಬೆಮರುತ್ತೆ
ಕೊನರುತ್ತೆ ಕೊರ್ಬುತ್ತೆ ಪುಳಕಿಸುತೆ ತೊನೆವುತ್ತೆ
ಮುನಿವುತ್ತೆ ಮುದ್ದಿಸುತೆ ತೂಗುತ್ತೆ ತೊನೆವುತ್ತೆ
ಗರ್ಬಿಸುತೆ ಗಳಪುತ್ತೆ ಕೆಲಬಲನನೇಡಿಸುತೆ
ಪರ್ಬಿ ಪಲ್ಲವಿಪ ಭಕ್ತಿಗೆ ಮನಮನೆಡೆಗುಡುತೆ

ಭಕ್ತಿಸುಖದಿಂದಿತರ ಸುಖವದೆಲ್ಲಿಯದೆನಿಸಿ
ಮುಕ್ತಿಸುಖದಿಂದಧಿಕಮಿದಕೆ ಪಡಿಯಿಲ್ಲೆನಿಸಿ
ಪರುಷಮಂ ಬಿಸುಡೆಂದು ಸುರಭಿಯಂ ತೆಗೆಯೆಂದು
ಸುರತರುವದೊಲ್ಲೆನೆಂದಮೃತಮಂ ಚೆಲ್ಲೆಂದು
ನಿಧಿಗಳಂ ನೂಂಕು ಚಿಂತಾಮಣಿಯನಿಡುಕೆಂದು
ಮಧುಗಿಧುಗಳೆಲ್ಲಿಯುಮವೇತಱವವೇಕೆಂದು
ಉರವಣಿಪ ಪರಮಬಕುತಿಯ ಸುಖದ ಸೊಕ್ಕೇಱೆ
ಪರಮಪದದಾನಂದ ಸುಖದ ಸುಧೆ ತಲೆಗೇಱೆ
ಹರ ನಿನ್ನ ಮೂರ್ತಿ ಕರಣಂಗಳೊಳ್ಕಾಲೂಱೆ
ಹರಹರ ನಮಶ್ಶಿವಾಯೆಂಬ ಕಳಕಳವೇಱೆ
ತೀವಿ ಗದ್ಗದಮುಣ್ಮೆ ಪೊಣ್ಮೆ ಕರಗುತೆ ಬರುತೆ
ವೀ ವೀ ವಿರೂ ರೂರು ಪಾಪಾ ಕ್ಷಕ್ಷವೆನುತ್ತೆ !
ಪೆಸರ್ಗೊಳುವ ಮೊದಲಕ್ಕರದೊಳೆ ಹರುಷಂಮೂಡಿ
ಮಿಸುಗುವೆರಡನೆಯಕ್ಕರದೊಳೆ ಸುಖವಕ್ಕಾಡಿ
ಮೂಱನೆಯ ವರ್ಣದೊಳ್ ಮಱೆದು ಪುಳಕಂ ನಗೆದು
ಮೀಱೆ ನಾಲ್ಕನೆಯಕ್ಕರದೊಳೆ ಮುನ್ನಿನಪಳಿದು
ಏನನೆಂಬೆನಚ್ಚ ಶಿವಭಕ್ತಿ ಪೆರ್ಚ್ಚಲ್ ಕರಂ
ಆನಂದರಸದಿಂದೆ ತೋದು ನಾಲ್ಕಕ್ಕರಂ
ನಾಲಗೆಯ ಮೇಲೆ ಹೊರಳುತ್ತೆ ಸಡಿಲುತ್ತಮಿರೆ
ಲೀಲೆಯಿಂದಶ್ರುನಯನದೊಳೆ ತೆರೆ ಮಸಗುತಿರೆ
ಮುತ್ತಿದರಿಷಡ್ವರ್ಗಮತ್ತ ಸಾರುತ್ತಮಿರೆ
ಹತಿರ್ದ್ದ ತಾಪತ್ರಯಂ ತಣ್ಣನಾಗುತಿರೆ
ಮನವು ನಿಮ್ಮಡಿಗೆಱಗಿ ಬುದ್ಧಿ ನೆಱೆ ತರ್ಕೈಸಿ
ನೆನಹು ನಿಮ್ಮೊಳು ಪುಗಲು ಚಿತ್ತವೆರಡಿಲ್ಲೆನಿಸಿ

ನಿನ್ನ ನಿಜವೆನ್ನ ಜೀವವನಿಂಬುಗೊಂಡಿರಲ್
ನಿನ್ನ ರೂಪೆನ್ನ ಕಣ್ಗಳನಿಂಬುಗೊಂಡಿರಲ್

ನಿನ್ನ ನುತಿಯೆನ್ನ ಜಿಹ್ವೆಯನಿಂಬುಗೊಂಡಿರಲ್
ನಿನ್ನಂಗವೆನ್ನ ಸರ್ವಾಂಗಮಂ ಪರ್ಬಿರಲ್
ನಿನ್ನ ನೆನಹೆನ್ನದೆಯೊಳೊಚ್ಚತಂಗೊಂಡಿರಲ್
ನಿನ್ನ ನೆನಹೆನ್ನದೆಯೊಳೊಚ್ಚತಂಗೊಂಡಿರಲ್
ಇಂತು, ನೀನೆನ್ನನೊಚ್ಚತವಾಗೆ ಕೈಕೊಂಡು
ಸಂತಸದೊಳಾಂ ನಿನ್ನನಗಲದೆ ಮನಗೊಂಡು
ಅರ್ಚಿಸುತ್ತಿರ್ಪುದಂ ಕುರುಣಿಸುವುದೆಲೆ ದೇವ
ನಚ್ಚಿ ನಲಿದಿರ್ಪುದಂ ಕರುಣಿಸುವುದೆಲೆ ದೇವ
ಮಚ್ಚಿ ಮಱಿದಿರ್ಪುದಂ ಕರುಣಿಸುವುದಲೆ ದೇವ
ಹೆಚ್ಚಿ ಹಿಗ್ಗಿರ್ಪುದಂ ಕರುಣಿಸವುದೆಲೆ ದೇವ

ದೇವ ಬೋಳೆಯರರಸ
ದೇವ ಕರುಣಿಗಳರಸ
ದೇವ ದಾನಿಗಳರಸ
ದೇವ ಮಾನಿಗಳರಸ

ಹೆಂಪಿಡಿದಮರವೃಕ್ಷ
ಹಂಪೆಯ ವಿರೂಪಾಕ್ಷ
ಬೇಡುವೆನಿದಂ ದೇವ
ಮಾಡುವುದಿದಂ ದೇವ

ಶಿಶುವೆಂದು ನೋಡುವುದು
ಪಶುವೆಂದು ಕೂಡುವುದು
ವಿಷಯದಿಂ ನೊಂದಪೆಂ
ಪಸಿವಿನಿಂ ಬೆಂದಪೆಂ

ಕಾಮದೊಳ್ ಕಂದಿದೆಂ
ತಾಮಸದೊಳ್ ಕುಂದಿದೆಂ
ಮೋಹದಿಂ ಮುಗ್ಗಿದೆಂ
ದೇಹದಿಂ ತೆಗ್ಗಿದೆಂ

ಏವೆಂ ಮಹಾದೇವ
ಕಾವುದು ಮಹಾದೇವ
ಆರನರ್ಚಿಪೆಂ ದೇವ
ಆರುಂಟು ಎನಗೆದೇವ
ಎನಗೆ ಹೊನ್ನುಂ ನೀನೆ
ಏನಗೆ ಚೆನ್ನುಂ ನೀನೆ

ಎನಗೆ ಕುಲವುಂ ನೀನೆ ಎನಗೆ ಬಲವುಂ ನೀನೆ
ಎನಗೆ ಬಲಹುಂ ನೀನೆ ಎನಗೆ ಮೆಲುಹುಂ ನೀನೆ

ಎನಗೆ ಸರ್ವಂ ನೀನೆ
ಎನಗೆ ಗರ್ವಂ ನೀನೆ
ಎನಗೆ ಮಾತೆಯು ನೀನೆ
ಎನಗೆ ಪಿತನುಂ ನೀನೆ

ಭವಭವಾಂತರದೊಳುಂ ನಿನ್ನನರ್ಚಿಸುತಿರ್ಪ
ತವೆ ಚೆನ್ನ ಭಕ್ತಿಯುಂ ಕರುಣಿ ಕರುಣಿಸು ಬೊಪ್ಪ
ರಕ್ಷಿಸು ವಿರೂಪಾಕ್ಷ ವೀಕ್ಷಿಸು ವಿರೂಪಾಕ್ಷ
ಕರುಣಿಸು ವಿರೂಪಾಕ್ಷ ಪರಿಕಿಸು ವಿರೂಪಾಕ್ಷ
ದಯೆಗೆಯ್ ವಿರೂಪಾಕ್ಷ ಭಯಹರ ವಿರೂಪಾಕ್ಷ
ಜಯ ಜಯ ವಿರೂಪಾಕ್ಷ ಜಯ ಜಯ ವಿರೂಪಾಕ್ಷ

॥ಕಂದ॥

ಅಕ್ಷಮನಳಿಪಂ ಮಾಯಾ।
ಪಕ್ಷನೆಯಾಂ ನಿನ್ನನೊಲ್ದು ಪೊರ್ದಿದೆನಭವಾ॥
ರಕ್ಷಿಸು ರಕ್ಷಿಸು ರಕ್ಷಿಸು।
ರಕ್ಷಿಸು ಹೋ ದೇವ ಹಂಪೆಯ ವಿರೂಪಾಕ್ಷ ॥

**ಪುಷ್ಪದ ರಗಳೆ ಸಮಾಪ್ತಂ**

**ಮಂಗಳ ಮಹಾ ಶ್ರೀ ಶ್ರೀ ಶ್ರೀ**

# ಲಿಂಗಾರ್ಚನೆಯ ರಗಳೆ

## ೧೨

ಕಂದ ॥

ಇಂದುಧರ ನಿಮ್ಮ ಚರಣ
ದ್ವಂದ್ವಮನನವರತವರ್ಚಿಸುತ್ತಿಹ ಸುಖಮಂ ॥
ತಂದೆ ಭವಭವದೊಳೀವುದು
ಕಂದರ್ಪಮದಾರಿ ಹಂಪೆಯ ವಿರೂಪಾಕ್ಷ ॥೧॥

## ಲಲಿತ ರಗಳೆ

ಶ್ರೀ ಗುರುವೆ ಹಂಪೆಯ ವಿರೂಪಾಕ್ಷ ಕೇಳಯ್ಯ
ನಾಗಭೂಷಣ ನಿಮ್ಮ ವೇಳೆವಾಳಾನಯ್ಯ
ಸಲುಗೆಯಿಂ ಬಿನ್ನಪಂ ಗೆಯ್ದಪೆಂ ನಾನಯ್ಯ
ಒಲವಿಂದೆನಗೆ ವಿರೂಪಾಕ್ಷ ಕರುಣಿಪುದಯ್ಯ
ಧರೆಯೊಳಗೆ ನಿಮ್ಮ ತೊಳ್ತೊಂದು ಸಲಹುವುದಯ್ಯ
ಪರಮಭಕ್ತರ ಪದಕೆನ್ನ ಸಲಿಸುವುದಯ್ಯ
ಆಗಲದೆ ನಿರಂತರಂ ನಿಮ್ಮನರ್ಚಿಸುವುದಂ
ಮಿಗೆ ಮೆಚ್ಚಿ ಮನವುಕ್ಕಿ ಬಂದು ಪುಳಕಿಸುವುದಂ
ತುಂಗಭದ್ರಾ ನದಿಯ ಸಲಿಲಮಂ ಪೊಗುತಂದು
ಲಿಂಗ ನಿಮಗಾನೆ ಮನವಾರೆ ಮಜ್ಜನಕೆಂದು ೧೦
ಮಗಮಗಿಪ ಚಂದನವನುದ್ವರ್ತನಂ ಮಾಡಿ
ಅಗರು ಕರ್ದಮಗಳಂ ನಿಮ್ಮ ಮೆಯ್ಯೊಳ್ ತೀಡಿ
ಅರೆವಿರಿದ ಸುರಗಿ ಸುರಹೊನ್ನೆ ಸಂಪಗೆಗಳಂ
ಪರಿಮಳವಸೀಯುತಿಹ ಮಲ್ಲಿಗೆಯಲರ್ಗಳಂ
ತನಿಗಂಪನೀವ ಮಲ್ಲಿಗೆ ಜಾಜಿ ಪೂಗಳಂ
ಮನವೊಸೆದು ಕುಯ್ತಂದು ಪರಿಮಳದ ಪಾದ್ರಿಯಂ
ಭರದಿಂದ ತಂದು ಪೂಮಾಲೆಯಂಗಳನೆಸಗಿ

X X X X X X

ಕಂಪಿಸುವ ಕೈಗಳಿಂ ಪೂಮಾಲೆಗಳನೆತ್ತಿ
ಪೆಂಪೆಸೆವ ಶಿವ ನಿಮ್ಮ ಸಿರಿಮುಡಿಯೊಳಗ ಸುತ್ತಿ
ಕಮನೀಯವೆನಿಪ ಗುಗ್ಗುಳದ ಧೂಪವನೆತ್ತಿ
ರಮಣೀಯವೆನಿಪ ಪೊಳೆವಾರತಿಗಳನೆತ್ತಿ
ಸಂತೋಷದಿಂದೆ ಮಾಣಿಕದ ಪರಿಯಾಣವಂ
ಮುಂತಿರಿಸಿ ನಲವಿಂದೆ ಬೆಳಗಿಽಡ್ಡಣಮುಮಂ
ಚಂದ್ರಿಕೆಗಳಂ ಕಡಿದು ಕಂಡಣಿಸಿದಂತಿಪ್ಪ
ಸಾಂದ್ರ ಧವಳಿತಮೆನಿಪ್ಪೋಗರವನಿಂಬಪ್ಪ
ದಿವ್ಯಾನ್ನವಮೃತಾನ್ನ ದೇವಾನ್ನವಂ ಬಡಿಸಿ
ನವ್ಯ ಸೌರಭ ಶಾಕಪಾಕಂಗಳಂ ಒಡಿಸಿ
ಹರುಷದಿಂ ಮನವುಕ್ಕಿ ಕರಗಳಂ ಮುಗಿಮುಗಿದು
ಹರನೆ ಕೈಕೊಳ್ಳೆಂದು ಭಕ್ತಿಯಿಂದಗಿದಳದು

ಚೆನ್ನಯ್ಯನಿಕ್ಕಿದಂಬಲಿಱಿದಾರೈಸಯ್ಯ
ಕನ್ನೆ ನಿಮಗೆಱೆದ ಹಾಲೆಂದು ಹಾರೈಸಯ್ಯ
ಚೋಳಿಯಕ್ಕನ ಬಾಯ ತಂತ್ತೆಂದು ಕೊಳ್ಳಯ್ಯ
ಚೋಳ ನಿಮಗಿತ್ತನ್ನವೆಂದು ಕೈಕೊಳ್ಳಯ್ಯ
ಕಣ್ಣಪ್ಪನಣುಗನೆಂದೆನಗೆ ಕರುಣಿಪುದಯ್ಯ
ಉಣ್ಣದಿರಬಾರದೆಂಬುದನಱಿದೆನುಣ್ಣಯ್ಯ
ಇಳೆಯಾಂಡ ಗುಡಿಮಾರನ ವರಸುತ ನಾನಯ್ಯ
ಛಳಿಸಿ ದೇವಾನ್ನವಿಕ್ಕಿದ ಸುತನು ನಾನಯ್ಯ
ಒಕ್ಕಲಿಗ ಮುದ್ದಯ್ಯನಕ್ಕಱಿನ ಸುತನಯ್ಯ
ಚಿಕ್ಕ ನುಣ್ಣದೊಡೆ ನಿಮ್ಮಣುಗಸುತ ನಾನಯ್ಯ
ಎಂದು ಭಕ್ತಿಯ ಮನದೊಳಗೆ ನಿಮಗುಣಲಿತ್ತು
ಸಂದ ಶರಣರವರನಿಧಾನ ನಿಮಗುಣಲಿತ್ತು
ಪನ್ನೀರ ಅಗ್ಗಣಿಯ ತಂದು ಹಸ್ತಕ್ಕೆಱೆದು
ಪನ್ನಗಧರಗೆ ಕೈಘಟ್ಟಿಯಂ ಕೊಟ್ಟೆಱೆದು

ಕರ್ಪೂರವೀಳೆಯುವನೊಸೆದಳ್ತಿಯಿಂ ಕೊಟ್ಟು
ಸರ್ಪಭೂಷಣ ನಿಮ್ಮ ಚರಣಕ್ಕೆ ಪೊಡವಟ್ಟು
ಹೆಚ್ಚಿಸಾರ್ದು ನಿಮ್ಮ ಪೂಜೆಯನಳ್ಕರಿಂ ನೋಡಿ
ಕಚ್ಚಿಕಂಠ ಶರಣೆಂದು ಸದ್ಭಕ್ತಿಯಿಂ ಬೇಡಿ
ಮನವುಕ್ಕಿ ಪೊಗಳಲುದ್ಯುಕ್ತನಾಗಿ ನಿಂದಿರ್ದು
ತನಿನೇಹವೊತ್ತರಿಸಿ ನಿಮ್ಮ ಹತ್ತಿರೆ ಸಾರ್ದು

ದೇವ ಮಾಮಹೃತ್ಕಮಲಮಂಡಿತ ವಿರೂಪಾಕ್ಷ
ದೇವ ಪ್ರಮಥನಿಚಯಪರಿವೃತ ವಿರೂಪಾಕ್ಷ
ದೇವ ನೃಕರೋಟಿಮಾಲಾಧರ ವಿರೂಪಾಕ್ಷ
ದೇವ ಕೋಟ್ಯರ್ಕತೇಜೋಮಯ ವಿರೂಪಾಕ್ಷ
ದೇವ ಗಂಗಾಮಕುಟರಂಜಿತ ವಿರೂಪಾಕ್ಷ
ದೇವ ಭೃಂಗೀಶ ನಾಟ್ಯಪ್ರಿಯ ವಿರೂಪಾಕ್ಷ
ದೇವ ಹರಹರ ಮನ್ಮನೋಹರ ವಿರೂಪಾಕ್ಷ

ಎಂದಿಂತು ಪೊಗಳ್ದು ತಣಿವೆಯ್ದದೇ ಬಾಯ್ಬಿಟ್ಟು
ನಿಂದೊಮ್ಮೆ ಹಾಡಿ ನೋಡುವೆನೆಂದು ಮನವಿಟ್ಟು
ಲಲಿತ ಬಂಗಾಳದಿಂದೊಲಿದು ನಿಮ್ಮಂ ಹಾಡಿ
ಮಲಹರಿ ವರಾಳಿಯಿಂದೊಲಿದು ನಿಮ್ಮಂ ಹಾಡಿ
ದೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ
ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ
ಬತ್ತೀಸ ರಾಗದಿಂ ಕರ್ತೃ ನಿಮ್ಮಂ ಹಾಡಿ
ಚಿತ್ತದೊಡೆಯನೆ ಮತ್ತೆಮತ್ತೆ ನಿಮ್ಮಂ ಹಾಡಿ

ಚೆನ್ನಯ್ಯನಂ ಹಾಡಿ ಹೊನ್ನಯ್ಯನಂ ಹಾಡಿ
ಕಿನ್ನರಿ ಬೊಮ್ಮತಂದೆಯನೊಪ್ಪದಿಂ ಹಾಡಿ
ಕಕ್ಕಯ್ಯನಂ ಹಾಡಿ ಚಿಕ್ಕಯ್ಯನಂ ಹಾಡಿ
ಅಕ್ಕರಿಂ ನಿಜಲಿಂಗಚಿಕ್ಕಯ್ಯನಂ ಹಾಡಿ

ಬಂಕೆಯ್ಯನಂ ಹಾಡಿ ಬಂಕಯ್ಯನಂ ಹಾಡಿ
ಲೆಂಕಮಂಚಣ್ಣನಂ ಕಲಿಕೇತನಂ ಹಾಡಿ
ಬಸವರಾಜನ ಮಳೆಯರಾಜನೋಹಿಲಯ್ಯನಂ
ಮುಸುಟೇಯ ಚೌಡಯ್ಯನಂ ಉದ್ಭಟಯ್ಯನಂ
ಕೇಶಿರಾಜನ ದುಗ್ಗಳೆಯದಾಸಿಮಯ್ಯನಂ
ಭಾಷೆಗೀಶನ ತಂದ ಮಿಸುಪಾದಿಮಯ್ಯನಂ
ಸಿದ್ಧರಾಮನನಲ್ಲಮನ ಮಲುಹಣಯ್ಯನಂ
ರುದ್ರಪಶುಪತಿ ಹಲಾಯುಧ ಮಯೂರಯ್ಯನಂ
ಸಾಮವೇದಿಗಳಿಗೊಪ್ಪುವ ಶ್ವಪಚದೇವನಂ
ಕಾಮಿತವನೀವ ಸಿರಿಯಾಳ ಚಂಗಳೆಯರಂ
ನಂಬಿಯಣ್ಣನಂ ನಿಂಬಿಯಕ್ಕ ಸತ್ಯಕ್ಕನಂ
ಕೆಂಭಾವಿಯೊಳ್ ಮೆರೆದ ಭಂಗಭೋಗಯ್ಯನಂ
ಕೊಂಡಗೂಳಿಯ ಕೇಶಿರಾಜ ತೆಲುಗೇಶನಂ
ಪಂಡಿತಾರಾಧ್ಯನಿಂಡೆಯ ಶಾಂತಿಮಯ್ಯನಂ
ಚೋಳ ಚೇರನು ಗೊಲ್ಲಳನ ಬಿಬ್ಬಿಬಾಚನಂ
ಕೋಳೂರು ಕೊಡಗೂಸು ಮಹದೇವಿಯಕ್ಕನಂ
ಕಾಳಿದಾಸನ ಕಣ್ಣಪನ ಚೆನ್ನಬಸವನಂ
ಮೋಳಿಗೆಯ ಮಾರಿತಂದೆಯ ಮಾದಿರಾಜನಂ
ಅಮ್ಮವ್ವೆ ರೆಮ್ಮವ್ವೆ ಕದಿರ ರೆಬ್ಬವ್ವೆಯಂ
ನಿರ್ಮಳಜ್ಞಾನಿ ಕಮಳವ್ವೆ ಬಾಚವ್ವೆಯಂ
ಗುರುಭಕ್ತ ಜಗದೇವ ಮೋಲ್ಲೆಬೊಮ್ಮಣ್ಣನಂ
ಪರದೈವರಹಿತ ಶಂಕರದಾಸಿಮಯ್ಯನಂ
ನಚ್ಚಿನರುವತ್ತು ಮೂವರನಸಂಖ್ಯಾತರಂ
ಅಚ್ಚರಿಯೊಳೆಸೆವ ಭಕ್ತಾಂಗನೆಯರೆಲ್ಲರಂ
ಭಕ್ತಿಯಿಂದಿಂತು ಪಾಡಲ್ಕೊಸೆದು ಮೆಚ್ಚಾಗಿ
ಯುಕ್ತಿಯಂ ಮೀಱಿದರಸಂ ನಿಮ್ಮ ನಚ್ಚಾಗಿ

ಇಂತು ಮಹಲಿಂಗಮಂ ಕಂಗಳೊಳಗೊತ್ತುತುಂ
ಮುಂತೆ ಹಾಹಾ! ಎಂದು ವಿಷಯಕ್ಕೆಯುಳ್ಕುತುಂ
ಭೃಂಗಿಯ ಪದಂಗಳಂ ನೆನೆನೆನೆದು ನೆನೆನೆನೆದು
ಭಂಗಿಯಿಂ ಕೋಡಗಾಟವನಾಡಿ ತೊನೆತೊನೆದು
ಗತಿವಾದ್ಯಗತಿಗಳಿಂ ಕುಣಿಕುಣಿದು ಕುಣಿಕುಣಿದು
ಅತಿಶಯಾನುಬೋಧೆಯಿಂ ಭಕ್ತಿಗೆ ಮನಂ ದಣಿದು
ಏನುವಂ ತಾನಱಿಯದಾನಂದದಿಂ ನಿಂದು
ಮೌನವೇ ಗತಿಮತಿಯದಾಗಿ ನೆರೆ ಸಲೆಸಂದು
ಪೊಗಳ್ವಕ್ಕರಂ ನಲಿದು ನಾಲಗೆಯ ಮೇಲಿರಲ್
ಬಗೆಯ ಭಾವಂ ಬಲಿದು ಮನವನೆಡೆಗೊಂಡಿರಲ್
ಕೈಕಂಪನವ ಭೀತಿ ಮೈಬೆನುರುಯಿರದೇಕೆ
ಬಾಯಿ ತೊದಳುಬ್ಬರಿಗೆ ಸುಯ್ಯುನಿನ್ನೊಳಗಿರಿಸೆ

ಏನೆನ್ನ ಶಂಭುವೆ ಸದಾಶಿವ ಮಹಾದೇವ
ಏನೆನ್ನ ಕಾರುಣ್ಯಸಿಂಧುವೆ ಮಹಾದೇವ
ಏನೆನ್ನನಚ್ಚಿನಧಿದೈವವೆ ಮಹಾದೇವ
ಏನೆನ್ನ ಮೆಚ್ಚಿನ ಮಹಾಸುಧೆ ಮಹಾದೇವ
ಏನೆನ್ನನೊಲಿದು ಪೊರೆವಾಳ್ದನೆ ವಿರೂಪಾಕ್ಷ
ಏನೆನ್ನನೊಲಿವ ಕುಲದೈವವೆ ವಿರೂಪಾಕ್ಷ
ಎಂದೀತೆರದಿ ನಿಮ್ಮನಪ್ಪಿ ಸುಖವಡೆವುದಂ
ತಂದೆ ಕರುಣಪುದಯ್ಯ ಸದ್ಭಕ್ತನಪ್ಪುದಂ

ಆವ ಜಾತಿಯೊಳಗೆ ಹುಟ್ಟಿಸಿದೊಡೆಲೆ ದೇವ
ನೀವಲ್ಲದಱಿಯದಂತಿರಿಸೆನ್ನನೆಲೆದೇವ
ಇಳಿಕೆಯ್ಯದೀಸುಖವನೆನಗೆ ಕರುಣಿಪುದಯ್ಯ
ಬಳುವಳಿಯ ತೊಳ್ತೆಂದು ಬಡಿದು ಕಲಿಸುವುದಯ್ಯ

ಬೇಱೊಂದನೊಲಿವನಲ್ಲಿಂಬಂದನಱಿವುದಯ್ಯ
ಸಾಱಿ ಮೊಱೆಯಿಟ್ಟೆನೆನ್ನಂ ದಯದಿ ನೋಡಯ್ಯ
ಆವ ತೆಱದಿಂದಾದೊಡಂ ಗುರು ವಿರೂಪಾಕ್ಷ
ದೇವ ಕರುಣಿಪುದಯ್ಯ ಹಂಪೆಯ ವಿರೂಪಾಕ್ಷ
ಆಳಿನಪಮಾನವಾಳ್ದಂಗಯ್ಯ ಕಾಯಯ್ಯ
ಬಾಳಿಸಿದೆ ಪಾಪಾತ್ಮವಿದನಿನ್ನು ನೀಗಯ್ಯ

ಮಾಡುವವನುಂ ನೀನೆ
ನೋಡುವವವನುಂ ನೀನೆ
ಬೇಡುವವನುಂ ನೀನೆ
ನುಡಿಸುವವನುಂ ನೀನೆ

ತೊತ್ತಿಂಗದೇನಯ್ಯ
ಭೃತ್ಯಂಗದೇನಯ್ಯ
ದೀನಂಗದೇನಯ್ಯ
ಮೌನವೇ ನಿಮಗಯ್ಯ ೧೩೦

ಈಕ್ಷಿಸು ವಿರೂಪಾಕ್ಷ
ರಕ್ಷಿಸು ವಿರೂಪಾಕ್ಷ
ದಯೆಗೆಯ್ ವಿರೂಪಾಕ್ಷ ಭಯಹರ ವಿರೂಪಾಕ್ಷ
ಜಯಜಯ ವಿರೂಪಾಕ್ಷ ಜಯ ನಮೋಸ್ತುತೇ

ಕಂದ

ಕೇಳಯ್ಯ ವಿರೂಪಾಕ್ಷಕ್ಕ–
ಪಾಳುವೆ ನಿಮ್ಮಡಿಯ ತೊತ್ತು ತೊತ್ತಿನ ಭೃತ್ಯಂ
ಗಾಳಿನಾಳಾಳಿನಾಳಾ
ಳೇಳುಂ ಭವದಲ್ಲಿ ಹಂಪೆಯ ವಿರೂಪಾಕ್ಷಂ

ಲಿಂಗಾರ್ಚನೆಯ ರಗಳೆ ಸಮಾಪ್ತಂ

ಮಂಗಳ ಮಹಾ ಶ್ರೀ ಶ್ರೀ ಶ್ರೀ

# ಜಯ ರಗಳೆ *

## ೧೩

ಕಂದ ॥

ಸುರರಾಜರಾಜ ರಾಜಾ
ಭರಣ ಭವಾನೀಮನಸ್ಸುಧಾಂಭೋಧಿ ಸುಧಾ
ಕರ ಭರಿತಚರಣ ಪರಮೇ
ಶ್ವರ ಕರುಣಿಪುದೆನಗೆ ಹಂಪೆಯ ವಿರೂಪಾಕ್ಷ

## ಮಂದಾನಿಲ ರಗಳೆ :

ಶ್ರೀ ಪಂಪಾನಗರೀ ನಿವಾಸ ಜಯ
ತಾಪತ್ರಯಹರ ಸುಕೃತವೇಷ ಜಯ
ಕೆಂಜೆಡೆಗಳ ಕಮನೀಯರೂಪ ಜಯ
ರಂಜಿಪ ಚಂದ್ರಕಳಾಪ್ರದೀಪ ಜಯ
ಗಂಗಾತರಳತರಂಗಜೂಟ ಜಯ
ತುಂಗಮಕುಟಮಣಿನಿಕರಜೂಟ ಜಯ
ನರ್ತಿಪ ನೀಳಾಲಕಲಲಾಟ ಜಯ
ಮೂರ್ತಿಪ ಭಾಳೇಕ್ಷಣದನೋಟ ಜಯ
ಕರ್ಣದೊಳೊಪ್ಪುವ ಮಣಿಕುಂಡಲ ಜಯ
ವರ್ಣನೆಗನುಪಮ ಮುಖಮಂಡಲ ಜಯ
ಬೆಳಗುವ ಗಂಡಸ್ಥಲದ ಗರುವ ಜಯ
ತೊಳಗುವ ದಂತಪ್ರಭೆಗಳರಸ ಜಯ
ಪಂಚಮುಖದ ಪರಮಾನಂದನೆ ಜಯ
ಮಿಂಚುವ ಗರಳದ ಗಂಭೀರನೆ ಜಯ

---

* ಹಂಪೆಯ ಹರೀಶ್ವರನ ಈ ಕೃತಿಯನ್ನು ಪದ್ಮಶ್ರೀ ಸಂಗೀತರತ್ನ ಪ್ರೊಫೆಸರ ಮಲ್ಲಿಕಾರ್ಜುನ ಮನಸೂರ ಅವರು ಸಂಗೀತಸಮಾರಾಧನೆಯ ಕೊನೆಯಲ್ಲಿ ಸಭಿಕರು ತಲ್ಲೀ ರಾಗುವಂತೆ ಭಕ್ತಿಭಾವಪೂರ್ಣವಾಗಿ ಭೈರವಿಯಲ್ಲಿ ಮೃದುಮಧುರವಾಗಿ ಹಾಡುತ್ತಾರೆ.

ಅನುಪಮ ಸುಧೆ ಸುರಿವಮೃತವಾಣಿ ಜಯ
ಘನತರವೆನಿಪ ಪಿನಾಕಪಾಣಿ ಜಯ
ನಿಜತನುವಿಳಸಿತ ಗಜಚರ್ಮನೆ ಜಯ
ಭಜಿಯಿಪ ಕಮಲಜ ಮಸ್ತಕಕರ ಜಯ
ಪುಂಡರೀಕ ವರಚರ್ಮವಸನ ಜಯ
ಮಂಡಿತಕರ ವಿಮಳೋರುದಂಡ ಜಯ

ಸುರರ ಮುಕುಟಮಣಿಖಚಿತಪಾದ ಜಯ
ಸುರುಚಿರಭಸ್ಮೋದ್ಧೂಳಿತಕರ ಜಯ
ಗಿರಿಜಾಲೋಕನಲೋಲಹೃದಯ ಜಯ
ಹರಿಸರಸಿಜಭವಮಧ್ಯೋದ್ಭವ ಜಯ
ಕಮಲಭವಾಂಡಾಭರಣಮೂರ್ತಿ ಜಯ
ವಿಮಳ ವಿರಾಜಿತ ಪುಣ್ಯಕೀರ್ತಿ ಜಯ
ಅತುಳಕಪಾಳಾಭೀಳಹಸ್ತ ಜಯ
ನತಸಂಕುಳ ವರದಭಯಹಸ್ತ ಜಯ

ಭಕ್ತಾನಂದದ ಕಾಮಧೇನು ಜಯ
ಭಕ್ತಮನಸ್ಸರಸಿರುಹಭಾನು ಜಯ
ಗುರುತರ ಸಕಳಕಳಾಪ್ರದೀಪ ಜಯ
ಸುರಮುನಿಜನಹೃದಯಸ್ವರೂಪ ಜಯ
ಘನತರ ವೇದಸ್ತುತಿಗತರ್ಕ್ಯ ಜಯ
ಮನಸಿಜ ಪಂಚಶರಕ್ಕಶಕ್ಯ ಜಯ
ಎಸೆವ ಮಹಾನಾಟ್ಯಾಭಿರಂಗ ಜಯ
ಪೆಸರಿಡಬಾರದನಾದಿಲಿಂಗ ಜಯ
ಉತ್ಕಟವೆನ್ನೊಳ್ ತೊಳಗುವವನೆ ಜಯ
ಹೃತ್ಕಮಲದೊಳ್ ಬೆಳಗುವವನೆ ಜಯ
ಪುಳಕವನೆಬ್ಬಿಸುತ್ತೈತಪ್ಪನೆ ಜಯ
ತೊಳಗಿ ಬೆಳಗುತೆನ್ನೊಳಿಪ್ಪನೆ ಜಯ

ಇದಿರ್ವಂದೊಲವಿಂ ಬೆಮರುಣ್ಬನೆ ಜಯ
ಪವೆದ ಸುಖಾಶ್ರುಗಳಿಂ ನನೆವನೆ ಜಯ
ಗದಗದುಕೆಗಳಿಗೆ ಪೊರಳುವವನೆ ಜಯ
ಉದರದ ನಿಷ್ಠೆಗೆ ತೆರಳದವನೆ ಜಯ
ನೋಡಲ್ ನೋಡಲ್ ನುಡಿಗೆಡಿಪನೆ ಜಯ
ಕೂಡುವ ತವಕದಿ ನಡುಗಿಸುವನೆ ಜಯ
ಮನವಂ ಮುಟ್ಟದೆ ಕರಗಿಸುವನೆ ಜಯ
ತನುವಂ ಸೋಂಕದೆ ಕೊರಗಿಸುವನೆ ಜಯ

ಬಾರದೆ ತೋರಿಸುತಳಲಿಸುವನೆ ಜಯ
ಸಾರದೆ ಸಾರುತ ಬಳಲಿಸುವನೆ ಜಯ
ಯುವೆಮರೆಯಾದೊಡೆ ಸೈರಿಸದನೆ ಜಯ
ತವಕಂ ಬಾಡಿದೊಡೋಸರಿಪನೆ ಜಯ
ಲಲ್ಲೆ ಸುರುಳ್ದೊಡೆ ನಿಲ್ಲದವನೆ ಜಯ
ತಲ್ಲಣವಾರಿದೊಡೊಲ್ಲದವನೆ ಜಯ
ಬುದ್ಧಿಯ ಬಳಕೆಗೆ ನಿಲುಕದವನೆ ಜಯ
ಸಿದ್ಧರ ಬಯಕೆಗೆ ಸಿಲುಕದವನೆ ಜಯ
ಪುಗಲೀಯದೆ ನೆರಕಾಡುವವನೆ ಜಯ
ಮಿಗೆ ಬೇಡಿದದುಂ ಕುಡುವವನೇ ಜಯ

ನೆನೆವರ ಮನವಂ ಕರಗಿಸುವನೆ ಜಯ
ಮನದ ತನುವೆ ಮರೆಯಾಗಿರ್ಪನೆ ಜಯ
ಹೃದಯದ ಕತ್ತಲೆಯುಂ ಕಳೆವನೆ ಜಯ
ಹೃದಯದ ಕಮಲವನರಳಿಸುವನೆ ಜಯ
ನಿರುಪಮ ಘನ ತೇಜೋರಾಶಿಯೆ ಜಯ
ನಿರಹಂಕಾರ ನಿರಾವರಣನೆ ಜಯ
ನಿತ್ಯನಿರಂಜನ ನಿರ್ವಿಕಲ್ಪ ಜಯ
ಸತ್ಯಜ್ಞಾನಾನಂದರೂಪ ಜಯ

ಜನನ ಮರಣರಹಿತಾನಂದನೆ ಜಯ
ಮುನಿಜನಹೃದಯಜ್ಞಾನದೀಪ ಜಯ

ಆಧಾರಸ್ಥಾನಾಬಿಭೂತ ಜಯ
ಸ್ವಾಧಿಷ್ಠಾನದ ಸೋಮಮಯನೆ ಜಯ
ಮಣಿಪೂರಕದ ನಿಜಸ್ವರೂಪ ಜಯ
ಎಣೆಪೊಡನಾಹತ ತತ್ಪುರುಷನೆ ಜಯ
ಮಿಸುಪ ವಿಶುದ್ಧಿಯ ಬುಧಮಯನೇ ಜಯ

ಎಸೆವಾಜ್ಞೇಯ ಸದಾಶಿವನೆ ಜಯ
ಇಚ್ಛಜ್ಞಾನ ಕ್ರಿಯಾಪತಿಯೆ ಜಯ
ಸ್ವಚ್ಛ ಪ್ರದ್ಯೋತಪ್ರಭಾವ ಜಯ
ಪರಮಾನಂದ ರಸಾಂಬುಧಿಯೆ ಜಯ
ನಿರತಿಶಯ ಜ್ಞಾನಾನಂದನೆ ಜಯ
ಅತ್ಯನುಪಮಗಳ ಕಾಳಕೂಟ ಜಯ
ಸಿತ್ಯನಿವಾಸಿತ ಹೇಮಕೂಟ ಜಯ

ಮನುಮತತೀರ್ಥ ವಿರಾಗಿವಾಸ ಜಯ
ಜನನವಿದೂರ ನಿಜಪ್ರಕಾಶ ಜಯ
ಪಂಪಾನಾಮ ಪುರಾಧಿನಾಥ ಜಯ
ಸೊಂಪಿನ ಶರಣಮನೋವರೂಥ ಜಯ
ತುಂಗಭದ್ರಯೋಗಾನಿಳಯನೆ ಜಯ
ಮಂಗಳಕರ ಶೀತಳದೀಧಿತಿ ಜಯ
ಪರಮೇಶ್ವರ ಜಯ ಕರುಣಾಕರ ಜಯ
ಪರಮಗುರುವೆ ಜಯ ಪರಮಾತ್ಮನೆ ಜಯ
ನಿರ್ಲೇಪನೆ ಜಯ ದುರ್ಲಭ್ಯನೆ ಜಯ
ಭೂತಹಿತನೇ ಜಯ ಮಾತೆಪಿತನೇ ಜಯ

ಪುರಹರನೇ ಜಯ
ಸ್ಮರಹರನೇ ಜಯ
ನಿರುಪಮನೇ ಜಯ
ನಿರವಯನೇ ಜಯ

ಸೊಂಪಿನ ಶರಣರ ಪ್ರತ್ಯಕ್ಷನೆ ಜಯ
ಹಂಪೆಯಲಿಂಗ ವಿರೂಪಾಕ್ಷನೆ ಜಯ
ಜಯಜಯ ದಿವ್ಯಜ್ಞಾನಿ ನಮಸ್ತೇ
ಜಯಜಯ ಭಕ್ತಪ್ರೇಮಿ ನಮಸ್ತೇ

ಕಂದ :

ಜಯ ಶರ್ವ ಜಯ ಸದಾಶಿವ।
ಜಯ ಶೂಲಿ ಜಯೋಗ್ರಭರ್ಗ ಚಂದ್ರಾಭರಣಾ ॥
ಜಯ ಪುರಹರ ಜಯ ಭಾವಹರ ।
ಜಯಂ ಜಯಜಯ ಜಯತು ಹಂಪೆಯ ವಿರೂಪಾಕ್ಷಾ ॥ ೧ ॥

## ಜಯ ರಗಳೆ ಸಮಾಪ್ತಂ

ಮಂಗಳ ಮಹಾ ಶ್ರೀ ಶ್ರೀ ಶ್ರೀ

ಮೊದಲನೆಯ ಭಾಗ ಮುಗಿದುದು

